ಆಗಸ್ಟ್, ೧೯೮೪

ಸ್ವಾತಂತ್ರ್ಯೋತ್ಸವ ಸಂಚಿಕೆ

# ಸಿದ್ಧಗಂಗಾ

# ಸಿದ್ಧಗಂಗಾ


ಸಂಪುಟ—೨೦ ಸಂಚಿಕೆ - ೮ — ಆಗಸ್ಟ್, ೧೯೮೪


[ಕಳೆದ ಸಂಚಿಕೆಯಿಂದ]

## ಶ್ರೀ ಸಿದ್ಧಗಂಗಾ ಮಹಿಮ್ನಃ ಸ್ತೋತ್ರ

—ಆಸ್ಥಾನ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ

ಪರಮಪಾವನಚರಿತ ವರಗುಣ
ಚರಿತನನುಪಮ ನಿತ್ಯ ಸುಖಕರ
ಶರಣಜನಮಂದಾರ ಮುಕ್ತಿವಿಹಾರಭವದೂರ ।
ಧರೆಯು ಪಾವನೆ ಸಿದ್ಧಗಂಗೆಯೊ
ನಿರುಪಮಿತ ದಾಸೋಹಮೂರುತಿ
ನಿರಯಹರನಟವೀಶ ಯತಿವರನೀಗೆ ಸಂಪದ್ಧನ ॥ ॥೫॥

ವೇಷಭೂಷಣ ವಿಷಯಪಟುತರ
ದಾಸೆಯಾಮಿಷ ತೊರೆದು ಭಕುತರ
ಪಾಶಬಂಧನ ಹರಿದು ಪರಶಿವನಡಿಯುಸ್ಸಂಗೊಳಿಸಿ ।
ದೇಶಿಗರಿಗುಣಬಡಿಪ ಕಾಯಕ
ವೀಶಸೇವೆಯಿದೆನುತ ಸಲಿಸಿದ
ನೀಶನುದ್ಧಾನೇಶ ಮುನಿವರನಿಗೆ ನಮಂಗಲವ ॥ ॥೬॥

# ಈ ಸಂಚಿಕೆಯಲ್ಲಿ


| ಲೇಖನದ ಹೆಸರು | ಲೇಖಕರ ಹೆಸರು | ಪುಟ |
|---|---|---|
| * ಶ್ರೀವಾಣಿ | | 5 |
| * ಸಂಪಾದಕೀಯ | | 7 |
| * ನವನೀತ | —ಸಂಗ್ರಹ | 9 |
| * ಚಿಂತನ | —ವಿದ್ವಾನ್ ಎಸ್. ಷಡಕ್ಷರಿ | 10 |
| * ಶ್ರೀ ಬಸವಣ್ಣನವರು-೬ | —ಡಾ|| ಆ. ನ. ಕೃಷ್ಣರಾಯರು | 11 |
| * ಗಮಕಪ್ರಸಾರ: ಚಂಪೂಕಾವ್ಯಗಳು —ಗಮಕಶಿಕ್ಷಣ | —ಸಂ. ಚನ್ನಪ್ಪ ಎರೇಸೀಮೆ | 19 |
| * ಪುರಾಣ ಮುನಿಗಳು-೭-ಗೌತಮ | —ಪ. ರಾಮಕೃಷ್ಣಶಾಸ್ತ್ರಿ | 24 |
| * ಬಿಜಾಪುರ ಸಚೇತ ಗೋಳಗುಮ್ಮಟ ಡಾ|| ಪಿ. ಜಿ. ಹಳಕಟ್ಟಿ | —ಹೆಚ್. ವಿ. ವೀರಭದ್ರಯ್ಯ | 27 |
| * ಭಾರತದ ಕಣ್ಮಣಿ ಜವಾಹರರು | —ಎಸ್. ಎಸ್. ಗದಗಕರ | 30 |
| * ಜಗದ್ಧರ್ಶನ ಮಾರ್ಲೆ-ನಾಥಸಂಘ | —ಎಂ. ಜಿ. ನಂಜುಂಡಾರಾಧ್ಯ | 31 |
| * ಸ್ತ್ರೀ ಸ್ವಾತಂತ್ರ್ಯ-ಚಳುವಳಿ | —ಜೆ. ಶಾರದ ರಾಜಶೇಖರ್ | 38 |
| * ಕ್ಷೇತ್ರವಾರ್ತೆ ದಾನಿಗಳ ದಾಸೋಹ | —ಸಂಪಾದಕ | 41 |
| * ಗ್ರಾಮಾಂತರ ಬಸವ ಜಯಂತಿ | —ಹೆಚ್. ವಿ. ವೀರಭದ್ರಯ್ಯ | 44 |
| * ವಿವಿಧ ಸಮಾರಂಭಗಳಲ್ಲಿ ಶ್ರೀ ಶ್ರೀಗಳವರು | —ಪಿ. ಎನ್. ಚಂದ್ರಶೇಖರಯ್ಯ | 47 |






# ಶ್ರೀವಾಣಿ

## ಹೆಣ್ಣು : ಅಂದು ಇಂದು

[ಕಳೆದ ಸಂಚಿಕೆಯಿಂದ]

ಲೋಕದ ಎಲ್ಲ ಮಹಾತ್ಮರ ಜೀವನದಲ್ಲಿ ಹೆಣ್ಣಿನ ಪ್ರಭಾವ ಮುದ್ರೆಯನ್ನು ಕಾಣಬಹುದು. ಹೆಣ್ಣು ತಾಯಿಯಾಗಿ; ಪತ್ನಿಯಾಗಿ ಗಂಡಸಿನ ಮೇಲೆ ಸತ್ಪ್ರಭಾವವನ್ನು ಬೀರಿರುವುದನ್ನು ಕಾಣಬಹುದು. ಅವರ ಬಾಳು ಬೆಳಗಲು ತನ್ನ ತ್ಯಾಗ ಮತ್ತು ಸಹನೆಗಳಿಂದ ಶ್ರಮಿಸಿದ್ದಾರೆ. ರವೀಂದ್ರರು ಒಂದು ಕಡೆ ಹೆಣ್ಣಿನ ಬಗ್ಗೆ ಹೀಗೆಂದಿದ್ದಾರೆ : "The woman is the cmbodiment of servicc and sacrifice". ಮನೆಯ ಜವಾಬ್ದಾರಿ ಎಷ್ಟು ದೊಡ್ಡದು! ಅದನ್ನು ಮಹಿಳೆ ಹೇಗೆ ನಿರ್ವಹಿಸಬಲ್ಲಳು ? ಎಂಬುದಕ್ಕೆ ಅವರು ತಮ್ಮ ಅನೇಕ ಕೃತಿಗಳಲ್ಲಿ ಸಮರ್ಥನೆ ನೀಡಿದ್ದಾರೆ. ಮಹಾತ್ಮ ಗಾಂಧೀಜಿವರು ಕೂಡ ಹೆಣ್ಣಿನಿಂದ ಪ್ರಭಾವಿತರಾಗಿದ್ದಾರೆ. ಇದನ್ನು ಅವರೇ ತಮ್ಮ ಆತ್ಮವೃತ್ತದಲ್ಲಿ ಹೇಳಿಕೊಂಡಿದ್ದಾರೆ. ಗಾಂಧೀಜಿ ಚಿಕ್ಕವರಿದ್ದಾಗ ಅವರನ್ನು ಸಾಕುವ ದಾದಿಯಿಂದ ಪ್ರಭಾವಿತರಾದರಂತೆ. ಎಳೆಯುವರಾಗಿದ್ದಾಗ ಗಾಂಧೀಜಿ ತುಂಬಾ ಹೆದರುತ್ತಿದ್ದರು. ಕತ್ತಲು ಕಂಡರೇ ನಡುಗುತ್ತಿದ್ದರು. ದಾದಿ ಅವರಿಗೆ ಧೈರ್ಯವನ್ನು ತುಂಬಿದಳು. 'ಭಯವಾದಾಗ ರಾಮನಾಮವನ್ನು ಸ್ಮರಿಸು, ಧೈರ್ಯ ತಾನೇ ಬರುತ್ತದೆ' ಎಂದು. ಮಗುವಿನ ಮುಗ್ಧ ಮನದಲ್ಲಿ ದೇವರನಾಮದ ಬೀಜವನ್ನು ನೆಟ್ಟವಳು ದಾದಿ. ಅವಳ ಆ ಮಾತು ಗಾಂಧಿಯಲ್ಲಿ ಶ್ರದ್ಧೆಯಾಗಿ ಬೆಳೆದು ಗಟ್ಟಿಗೊಂಡಿತು. ಗಾಂಧೀಜಿಯವರ ಮೇಲೆ ಪ್ರಭಾವ ಬೀರಿದ ಎರಡನೆಯ ಹೆಣ್ಣು ಅವರ ತಾಯಿ. ಗಾಂಧೀಜಿ ಪರದೇಶಕ್ಕೆ ಹೊರಟಾಗ ಆಕೆ ಮೂರು ಸಂಗತಿಗಳನ್ನು ಹೇಳಿ ಆಣೆ ಮಾಡಿಸಿದಳು. ೧) ಮದ್ಯಪಾನ ಮಾಡಬಾರದು. ೨) ಮಾಂಸ ತಿನ್ನಬಾರದು. ೩) ಪರಸ್ತ್ರೀ ಸಂಗ ಮಾಡಬಾರದು ಇವೇ ಆ ಮೂರು ಪ್ರತಿಜ್ಞೆಗಳು.

ಗಾಂಧೀಜಿಯವರ ವಿದೇಶ ಜೀವನದಲ್ಲಿ ಅವರ ದೃಢ ಚಿತ್ತವನ್ನು ಅಲುಗಾಡಿಸುವ ಪ್ರಸಂಗಗಳು ಘಟಿಸಿದಾಗ ಗಾಂಧೀಜಿಯವರು ತಾಯಿಯ ವಚನವನ್ನು ನೆನಸಿಕೊಂಡು ಅವುಗಳಿಂದ ಪಾರಾಗುತ್ತಿದ್ದರು. ಗಾಂಧೀಜಿಯವರ ಮೇಲೆ ಬೀರಿದ ಮೂರನೆಯ ಪ್ರಶ್ನೆಯೆಂದರೆ ಅವರ ಸತಿ ಕಸ್ತೂರಿಬಾ ಅವರೇ ಹೇಳಿದ್ದಾರೆ. 'ತನಗೆ ಸತ್ಯಾಗ್ರಹದ ಕಲ್ಪನೆ ಬಂದದ್ದು ತಮ್ಮ ಸತಿಯಿಂದ' ಹೀಗೆ ಮಹಾತ್ಮರ ಜೀವನದಲ್ಲಿ ಮಹಿಳೆಯ ಪಾತ್ರದ ಘನತೆ ಗೌರವಗಳೇನೆಂಬುದನ್ನು ತಿಳಿಯಬಹುದಾಗಿ.


[ಮುಂದುವರಿಯುತ್ತದೆ]

"ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಪಂ॥ ಚನ್ನಪ್ಪ ಎರೇಸೀಮೆ

ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು

ಪಿ. ಎಸ್. ಚಂದ್ರಶೇಖರಯ್ಯ

ಬಸವರಾಜು

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ

ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಅಜೀವ ಸದಸ್ಯತ್ವ 201-00 ರೂ

1984 ನೇ ಜನವರಿಯಿಂದ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ, ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

ಸ್ವಾತಂತ್ರ್ಯ ಬಂದು ಮೂವತ್ತೇಳು ವರ್ಷಗಳು ತುಂಬಿದುವು. ಮೂವತ್ತೆಂಟನೆಯ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸುತ್ತಿದ್ದೇವೆ. ಜಗತ್ತಿನ ಇತಿಹಾಸದಲ್ಲಿ ಆಗಸ್ಟ್ 15 ಒಂದು ಮಹತ್ವದ ದಿನ. ಭಾರತೀಯರ ಭಾಗ್ಯ ಭಾಸ್ಕರ ಉದಯವಾದ ದಿನ. ಸಹಸ್ರಾರು ದೇಶಭಕ್ತರ ಶ್ರಮದ, ತ್ಯಾಗದ ಫಲ ಈ ಸ್ವಾತಂತ್ರ್ಯ. ಅವರು ಪುಣ್ಯ ಪುರುಷರು. ಭವ್ಯ ಭಾರತದ ಕನಸು ಕಂಡವರು. ಸ್ವಾತಂತ್ರ್ಯಕ್ಕಾಗಿ ಮನೆಮಠ-ಹೆಂಡತಿ ಮಕ್ಕಳನ್ನು ಕಳೆದುಕೊಂಡರು. ಆದರೂ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ಅವರ ಸೇವಾನಿಷ್ಠೆಯ, ಸಂಕಲ್ಪದ, ಅಭಿಮಾನದ ಮಹತ್ವಾಕಾಂಕ್ಷೆಯ, ಅಮೃತ ಫಲ ಈ ಸ್ವಾತಂತ್ರ್ಯ. ಅವರ ಕನಸು ನನಸಾಗಲಿಲ್ಲ. ಅವರ ಆಸೆ ದಳದಳವಾಗಿ ಅರಳಲಿಲ್ಲ. ಹಂಬಲ ರಾಷ್ಟ್ರದ ಉದ್ದಗಲದಲ್ಲಿ ಕುಡಿಯೊಡೆಯಲಿಲ್ಲ. ಅವರಲ್ಲಿದ್ದ ನಿಸ್ಸೀಮ ದೇಶಭಕ್ತಿ ಇಂದು ಹಗಲು ಹೊತ್ತು ಪಂಜುಹಿಡಿದು ಹುಡುಕಿದರೂ ಕಾಣುತ್ತಿಲ್ಲ. ಗಾಂಧೀಜಿಯವರ ಕನಸಿನ ರಾಷ್ಟ್ರ ಕನಸಾಗಿಯೇ ಉಳಿದುಹೋಯಿತು. ಇಂದು ದೇಶವನ್ನಾಳುತ್ತಿರುವವರಲ್ಲಿ ದೇಶದ ಹಿತಕ್ಕಿಂತ, ಪಕ್ಷದ ಹಿತ, ಪಕ್ಷದ ಹಿತಕ್ಕಿಂತ ಕುಟುಂಬದ ಹಿತ, ಕುಟುಂಬದ ಹಿತಕ್ಕಿಂತ ವ್ಯಕ್ತಿಯ ಹಿತ ಎದ್ದು ಕಾಣುತ್ತಿದೆ.

ಸ್ವಪ್ರತಿಷ್ಠೆ, ಸ್ವಜನಪಕ್ಷಪಾತ, ಭ್ರಷ್ಟತೆ, ಹೇಳಲಸಾಧ್ಯವಾದ ಸೋಮಾರಿತನ ಲಂಪಟತನ, ವಿಜಯ ವೈಜಯಂತಿಯಾಗಿವೆ. ಭ್ರಷ್ಟಾಚಾರವೇ ಬದುಕಿನ ರಾಜಮಾರ್ಗವಾಗಿದೆ. ಸಜ್ಜನರು, ಶ್ರಮ ಜೀವಿಗಳು, ಮುಗ್ಧರು ಬಾಳುವುದೇ ದುರ್ಭರವಾಗುತ್ತಿದೆ. ನಮ್ಮ ಶಾಸಕರು, ಜನನಾಯಕರು, ಯಾರನ್ನು, ಯಾವುದನ್ನು, ಯಾವ ಮೌಲ್ಯಗಳನ್ನು ಪ್ರತಿನಿಧಿಸುತ್ತಿದ್ದಾರೆ ? ಅರ್ಥವಾಗುತ್ತಿಲ್ಲ. "ಬೇರು ನೀರುಂಡಾಗ ತಣಿಯವೆ ಭೂರುಹದ ಶಾಖೋಪಶಾಖೆಗಳು" ಆ ಬೇರನ್ನೇ ಮರೆತರೆ ಹೇಗೆ? ಮರೆಯುವುದೇ ಸಚ್ಚಾರಿತ್ರ್ಯವೇ? ಹೀಗಾದರೆ ಹೇಗೆ? ಬೇಲಿ ಎದ್ದು ಹೊಲ ಮೇಯುವುದೆ ? ಚಿಂತನೆ ಮಾಡಬಾರದೆ ? ಆತ್ಮ ವಿಮರ್ಶೆ ಯಾಕಾಗುತ್ತಿಲ್ಲ ? ಇಂದು ಅದು ಅಗತ್ಯ.

ಸರ್ಕಾರ ಅನುಸರಿಸುತ್ತಿರುವ ವಿಧಾನ ವಾಸ್ತವ ನೆಲಗಟ್ಟಿನಿಂದ ಬಹುದೂರವಾಗಿದೆ. ಏಳನೆಯ ಪಂಚವಾರ್ಷಿಕ ಯೋಜನೆ ನಡೆದಿದೆ. ಆದರೇನು ? ಸಾಧಿಸಿದ

ಸಿದ್ಧಿ ಗಣಿಸಲಾಗಿಯುವಲ್ಲ. ಇನ್ನೂ ಬಡತನದ ರೇಖೆಗಿಂತ ಕೆಳಗಿರುವ ಭಾರತೀಯರು ಕೋಟಿ ಕೋಟಿ ಮಂದಿ. ಕುಡಿಯಲು ನೀರಿಲ್ಲದ ಹಳ್ಳಿಗಳು ಸಾವಿರಾರು. ಎರಡು ಹೊತ್ತು ಊಟ ಮಾಡುವ ಭಾಗ್ಯ ಬಹುಮಂದಿ ಭಾರತೀಯರಿನ್ನೂ ಪಡೆದಿಲ್ಲ. ಅಂದಮೇಲೆ –ನಾವು ಪಡೆದ ಸ್ವಾತಂತ್ರ್ಯಕ್ಕೆ ಬಂದ ಫಲವೇನು ? ರಾಷ್ಟ್ರೀಯ ಅಂತರ್ರಾಷ್ಟ್ರೀಯ ಸಮಸ್ಯೆಗಳ ನೆನಗುದಿಯಲ್ಲಿದ್ದೇವೆ. ಇದರ ಜೊತೆಗೆ ಪಂಜಾಬ್ ಕಾಶ್ಮೀರ, ಅಸ್ಸಾಂ, ಬಿಹಾರ ರಾಜ್ಯಗಳ ಅವಾಂತರ. ಪ್ರತ್ಯೇಕತಾ ಮನೋಭಾವ ರಾಷ್ಟ್ರ ಪುರುಷನ ಶರೀರವನ್ನೇ ಕತ್ತರಿಸುವಂಥ ವಿಪತ್ಕಾರಕ ಪ್ರವೃತ್ತಿ. ಎಲ್ಲ ಅಮಂಗಲ. ಯುವ ಜನಾಂಗ ದಿಕ್ಕು ದೆಸೆ ಕಾಣದೆ ಓಡುತ್ತಿದ್ದಾರೆ. ಸ್ವಾತಂತ್ರ್ಯ ಇತಿಹಾಸವೇ ಅವರಿಗೆ ಗೊತ್ತಿಲ್ಲವೆಂಬಂತೆ ಓಡುತ್ತಿದ್ದಾರೆ. ಮಹಾಪುರುಷರು ಪ್ರಾಣ ತೆತ್ತು ತಂದುಕೊಟ್ಟ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಬೇಕಾಗಿದೆ. ಸಮೃದ್ಧವಾಗಿ ರಾಷ್ಟ್ರವನ್ನು ಕಟ್ಟಬೇಕಾಗಿದೆ. ಅದಕ್ಕಾಗಿ ಜಾಗತಿಕ ಇತಿಹಾಸದ ಉದಾಹರಣೆಗಳತ್ತ ಕಣ್ಣು ಹಾಯಿಸಬೇಕು. ಪಾಶ್ಚಾತ್ಯ ರಾಷ್ಟ್ರಗಳ ಸ್ಪಷ್ಟ ಚಿತ್ರ ನಮಗಿಂದು ಮಾದರಿಯಾಗಬೇಕು. "ಅಲ್ಪ ಶ್ರಮ, ಅಧಿಕ ಲಾಭ" ದ ಸೂತ್ರ ಅಳಿಸಿ "ಅಧಿಕ ಶ್ರಮ, ಅಧಿಕ ಫಲ ಗಾಯತ್ರಿಯಾಗಬೇಕು. ಭಾರತೀಯ ಇಂದು ಕಳೆದು ಹೋಗಿದ್ದಾನೆ. ಅವನನ್ನು ಮತ್ತೆ ಪ್ರತಿಷ್ಠಾಪಿಸಬೇಕು ಆ ಸೇತು ಹಿಮಾಚಲದವರೆಗೆ ಅವನ ವಿರಾಟ್ ದರ್ಶನವಾಗಬೇಕು. ಅಂತಹ ವಾತಾವರಣ, ಜೀವನ ಸ್ಥಿತಿ ಮೂಡಿ ಬರುವಂತೆ, ರಾಷ್ಟ್ರೀಯ ಭಾವನೆಯ ಮಹಾಮಹಿಮ ಪ್ರತಿ ಪ್ರಜೆಯದಾಗಬೇಕು. ಹಿರಿಯರು ತಪ್ಪು ಹಾದಿಯಲ್ಲಿ ನಡೆದಿದ್ದರೆ ಆ ದಾರಿ ಬಿಟ್ಟು ಹೊಸ ಹಾದಿಯಲ್ಲಿ ಯುವ ಜನಾಂಗ ನಡೆಯಬೇಕು. ರಾಷ್ಟ್ರದ ಸಂಪತ್ತು, ಜೀವಶಕ್ತಿ, ಯುವಜನತೆ. ಅವರಿಂದು ಎಚ್ಚರವಾಗಬೇಕು. ಸಂಕಲ್ಪಚಿತ್ತರಾಗಿ ಕ್ರಿಯಾಶೀಲರಾಗಬೇಕು. ಅಲ್ಲದೆ ಲೋಪದೋಷಗಳೇ ಆದರ್ಶವಾಗಬಾರದು. ಗುಣಶೀಲಗಳು ಅವುಗಳ ಸ್ಥಾನದಲ್ಲಿ ಅರಳಬೇಕು. ನಡೆವವರು ಎಡವದಿರಲು ಸಾಧ್ಯ ಹೇಗೆ? ಅದಕ್ಕಾಗಿಯೇ ನಮ್ಮ ದೃಷ್ಟಿ ಬದಲಾಗಬೇಕು. "ಕಣ್ಣೆತ್ತಿಯೂ ನೋಡದಿರು ಮಗು ದೊಡ್ಡವರ ಸಣ್ಣತನದತ್ತ, ಬಿಟ್ಟು ಬಿಡು ಅವರನ್ನು ಅತ್ತಕಡೆಗೆ, ಕೆಟ್ಟ ಇಟ್ಟಿಗೆಯಿಂದ ಕಟ್ಟದಿರು ನಿನ್ನ ಮನೆ ನಾಳಿನಾಸೆಯ ಶಿಖರ ನೀನು ನಮಗೆ" -ಎಂಬ ಕವಿವಾಣಿ ದಾರಿದೀಪವಾಗಬೇಕು. ಶಿಸ್ತು, ಸಂಯಮ, ಪ್ರಾಮಾಣಿಕತೆ, ದಕ್ಷತೆ, ದೂರಾಲೋಚನೆ, ದುಡಿಮೆ, ಯುವಜನಾಂಗದ ಆಸ್ತಿಯಾಗಬೇಕು. ಕ್ಷುಲ್ಲಕ ಭಾವನೆಗಳು, ಕ್ಷುದ್ರ ಚಿಂತನೆಗಳು ಪುಡಿಪುಡಿಯಾಗಬೇಕು. "ನಾವೆಲ್ಲರೂ ಒಂದೇ ಕುಲ, ಒಂದೇ ಜಾತಿ, ಒಂದೇ ಮತ" ಎಂಬ ಆತ್ಮವಿಶ್ವಾಸದ ಪವಿತ್ರ ನುಡಿ ಮೊಳಗಬೇಕು. ಭರತಖಂಡದ ಆತ್ಮ ಹಳ್ಳಿಗಳಲ್ಲಿದೆ ಎಂಬುದನ್ನು ಅರಿತು ಅವುಗಳ ಉದ್ಧಾರಕ್ಕೆ ಕಂಕಣ ಕಟ್ಟಬೇಕು.

(36 ನೇ ಪುಟ ನೋಡಿ)



# ★ ನವನೀತ ★

(ಸಂಸ್ಕೃತ ಶ್ಲೋಕಗಳ ಕನ್ನಡ ಭಾವಾನುವಾದ)

(1) ಏಕಃ ಪ್ರಸೂಯತೇ ಜಂತುರೇಕ ಏವ ಪ್ರಲೀಯತೇ।
ಏಕೋಽನು ಭುಂಕ್ತೇ ಸುಕೃತಮೇಕ ಏವ ಚ ದುಷ್ಕೃತಮ್॥

— ಭಾಗವತ.

ಪ್ರಾಣಿಯು ಈ ಲೋಕದಲ್ಲಿ ಏಕಾಕಿಯಾಗಿ ಹುಟ್ಟುತ್ತಾನೆ, ಒಬ್ಬನೇ ಸಾಯುತ್ತಾನೆ ಒಬ್ಬನೇ ತಾನು ಮಾಡಿದ ಪುಣ್ಯವನ್ನು ಅನುಭವಿಸುತ್ತಾನೆ, ಹಾಗೆಯೇ ಕೆಟ್ಟದ್ದನ್ನು ತಾನು ಅನುಭವಿಸುತ್ತಾನೆ.

(2) ಪ್ರಥಮೇ ನಾರ್ಜಿತಾ ವಿದ್ಯಾ ದ್ವಿತೀಯೇ ನಾರ್ಜಿತಂ ಧನಂ।
ತೃತೀಯೇ ನಾರ್ಜಿತಂ ಪುಣ್ಯಂ ಚತುರ್ಥೇ ಕಿಂ ಕರಿಷ್ಯತಿ॥

—ಸುಭಾಷಿತ ರತ್ನ ಸಮುಚ್ಚಯಃ

ವಯಸ್ಸಿನ ಮೊದಲನೆಯ ಭಾಗದಲ್ಲಿ (ಬಾಲ್ಯದಲ್ಲಿ) ವಿದ್ಯೆಯನ್ನು ಕಲಿಯಲಿಲ್ಲ. ಎರಡನೆಯ ಭಾಗವಾದ ಯೌವನದಲ್ಲಿ ಹಣವನ್ನು ಸಂಪಾದಿಸಲಿಲ್ಲ. ಮೂರನೆಯದಾದ ಮುಪ್ಪಿನಲ್ಲಿ ಪುಣ್ಯ ಕಾರ್ಯವನ್ನು ಮಾಡಲಿಲ್ಲ. ನಾಲ್ಕನೆಯ ಭಾಗದಲ್ಲಿ ಮರಣ ಬಂದಾಗ ಏನು ಮಾಡುವೆ ?

(3) ಸಂಪನ್ನತರಮೇವಾನ್ನಂ ದರಿದ್ರಾ ಭುಂಜತೇ ಸದಾ।
ಕ್ಷುತ್ ಸಾಧುತಾಂ ಜನಯತಿ ಸಾ ಚಾಢ್ಯೇಷು ಸುದುರ್ಲಭಾ॥

— ಮಹಾಭಾರತ.

ಬಡವರು ರುಚಿಕರವಾದ ಅನ್ನವನ್ನೇ ಸದಾ ಉಣ್ಣುತ್ತಾರೆ, ಏಕೆಂದರೆ, ಹಸಿವು ಅನ್ನದಲ್ಲಿ ರುಚಿಯನ್ನು ಹುಟ್ಟಿಸುತ್ತದೆ. ಹಣವಂತರಿಗೆ ಹಸಿವು ದುರ್ಲಭ.

# ಚಿಂತನ–3

–ವಿದ್ವಾನ್ ಎಸ್. ಷಡಕ್ಷರಿ, ಬಿ.ಎಸ್.ಸಿ, ಎಂ.ಎ., ಬಿ.ಇಡಿ.,

ನನ್ನ ಸ್ನೇಹಿತರೊಬ್ಬರನ್ನು ಕಾಣಲು ಒಮ್ಮೆ ಬೆಂಗಳೂರಿಗೆ ಹೋಗಿದ್ದೆ. ಧಾರ್ಮಿಕ ಸಮಾರಂಭವೊಂದರಲ್ಲಿ ಭಾಗವಹಿಸಿದ್ದೆವು, ನಂತರ ಅವರ ಅಪೇಕ್ಷೆ ಮೇರೆಗೆ ಚಲನಚಿತ್ರ ನೋಡಲು ಸಿನಿಮಾ ಮಂದಿರಕ್ಕೆ ಹೋದೆವು. ಕಿಕ್ಕಿರಿದ ಜನಸಂದಣಿ, ಚಿತ್ರ ಬಹುಪಾಲು ಪಾಶ್ಚಿಮಾತ್ಯ ಪರಂಪರೆಯನ್ನು ಹೋಲುವಂತೆ ಇತ್ತು. ರಾಗ ರಂಜನೆಗೆ ಪ್ರಧಾನವೆಂಬಂತೆ ಇತ್ತು. ಕಥಾಸಾಹಿತ್ಯ ಸ್ವಲ್ಪ ಅಶ್ಲೀಲವೆಂಬ ಅಭಿಪ್ರಾಯ ಮೂಡಿಬಂತು. ಕೆಲವು ಪ್ರೇಕ್ಷಕರು ಆ ಚಿತ್ರದ ಅನುಕರಣೆಯಿಂದ ಅಸಭ್ಯ ವರ್ತನೆಯೊಂದಿಗೆ ಲಲ್ಲೆಹೊಡೆಯುವುದು ಕಂಡುಬಂದಿತು. ಚಲನ ಚಿತ್ರಕ್ಕೂ ಇವತ್ತಿನ ಪ್ರೇಕ್ಷಣೀಯ ಸಮಾಜಕ್ಕೂ ಇರಬಹುದಾದ ಸಂಬಂಧವನ್ನು ಕಲ್ಪಿಸಿದಾಗ ಈ ಸಂದರ್ಭದಲ್ಲಿ ನನಗೆ ಹೀಗನ್ನಿಸಿತು.

ಚಲನ ಚಿತ್ರಗಳನ್ನು ನೋಡಿ ನೋಡಿ ಜನ ಕೇವಲ ರಸಿಕತೆ ವಿಡಂಬನ ವಿಮರ್ಶೆ ಬುದ್ಧಿಗಳನ್ನು ಮಾತ್ರ ಹೆಚ್ಚಿಸಿಕೊಳ್ಳುವದಾಗಬಾರದು. ಇದರ ರುಚಿ ಹತ್ತಿದವರು ಉಪವಾಸವೋ, ಸಾಲವೋ ಮಾಡಿ ನೋಡುತ್ತಾರೆ. ಚಲನಚಿತ್ರ ಇರುವ ಕಡೆಯಲ್ಲಿ ಜನರಿಗೆ ಪುರಾಣ ಬೇಡ, ಕಾವ್ಯವಾಚನ ಬೇಡ, ನಾಟಕ ಬೇಡ ಎನಿಸುವಂತಾಗುತ್ತಿದೆ. ಏಕೆಂದರೆ ಸಿನಿಮಾ ಮಂದಿರದಲ್ಲಿ ಸುಖಾಸೀನರಾಗಿ ಸ್ನೇಹ-ಪ್ರೇಮ, ಧಾನ-ಧೂಮ ಮುಂತಾದುವುಗಳೊಡಗೂಡಿ ಎರಡು ಮೂರು ಘಂಟೆಯೊಳಗೆ ದೇಶವಿದೇಶಗಳ ಪ್ರಸಿದ್ಧ ತಾರೆಯರ ಅಭಿನಯವನ್ನು ನೋಡಬಹುದು. ಅವರ ಗಾನವನ್ನು ಕೇಳಬಹುದು. ಇದರಲ್ಲಿ ಪ್ರಪಂಚವೇ ಸ್ಪರ್ಧಿಸುತ್ತದೆ. ಅಂದ ಮಾತ್ರಕ್ಕೆ ಚಲನ ಚಿತ್ರಗಳು ಇರಬಾರದು ನೋಡಬಾರದು ಎಂದರ್ಥವಲ್ಲ. ನಿಜಕ್ಕೂ ಇವತ್ತಿನ ಜನತೆಗೆ ಇವು ಪ್ರಗತಿಯ, ಸಂಸ್ಕೃತಿಯ ಮಾಧ್ಯಮವಾಗಬೇಕೆಂಬ ಅನಿಸಿಕೆ. ಚಿತ್ರ ಕಥೆಯಿಂದ ಮೇಲೆ ಕೆಲವು ರಸವಿಶೇಷವಿರಲೇಬೇಕು. ನೋಡುವ ಜನ ಹಂಸಕ್ಷೀರ ನ್ಯಾಯದಂತೆ ಸೂಕ್ತವಾದ ಆದರ್ಶ ವಿಚಾರಗಳನ್ನು ಮೈಗೂಡಿಸಿಕೊಂಡರೆ ಕ್ಷೇಮ

ಇಲ್ಲಿ ನಮಗೆ ಪ್ರಸಕ್ತವಾದ ಸಂಗತಿಯೆಂದರೆ ಸ್ತೋತ್ರ, ಸುಭಾಷಿತ, ಪುರಾಣ, ಪುಣ್ಯಕಥೆಗಳನ್ನು ಓದುವವರು ವಿರಳವಾಗುತ್ತಿರುವ ಕಾಲದಲ್ಲಿ ತೋಚಿದ್ದನ್ನೆಲ್ಲ ಗೀಚಿ ಸೃಷ್ಟಿಸಿರುವ ಗಣ್ಯರೆನಿಸುವವರಿಂದ ಮಾನ್ಯತೆಯನ್ನು ಪಡೆದಿರುವ, ಕೆಲವು ಅಶ್ಲೀಲ ಸಾಹಿತ್ಯದ ಸಣ್ಣ ಕಥೆ ಪುಸ್ತಕಗಳು ಶಿಕ್ಷಣ ಕ್ಷೇತ್ರಕ್ಕೆ ಪಠ್ಯಪುಸ್ತಕಗಳಾಗಿ ವಿದ್ಯಾರ್ಥಿ

(37ನೇ ಪುಟ ನೋಡಿ)



# ಬಸವಣ್ಣನವರು-೬

(ಮುಂದುವರಿದ ಲೇಖನ)

–ದಿ|| ಆ. ಸ. ಕೃಷ್ಣರಾಯರು

## ಸಾಧನಯೋಗ :-

ತಾನುಂಡು ಮಿಕ್ಕುದನ್ನು ಶಿವಾರ್ಪಣಮಾಡುವುದೂ, ತನಗೆ ಅವಧಿ ದೊರೆತಾಗ ವಿರಾಮ ವೇಳೆಯಲ್ಲಿ ಶಿವಚಿಂತನೆಮಾಡುವುದೂ, ಭಕ್ತಿಯೆನಿಸುವುದಿಲ್ಲ. ತನ್ನದೆಲ್ಲವನ್ನೂ, ತನ್ನನ್ನೇ ಶಿವಚರಣದಲ್ಲಿ ಈಡಾಡುವುದು ಭಕ್ತಿ. ತನಗೆ ಅತ್ಯಂತ ಪ್ರಿಯವಾದುದನ್ನು ನಲ್ಮೆಯ ತಾಯಿ ತನ್ನ ಮಗುವಿಗೆ ಮೀಸಲಾಗಿಡುವಂತೆ ಶಿವನಿಗೆ ಅರ್ಪಿಸುವುದೇ ಭಕ್ತಿ. ಇಂತಹ ಭಕ್ತಿಯ ಓಜೆಯನ್ನು ಕಾಣಬೇಕು, ಬಸವಣ್ಣನವರಲ್ಲಿ; ಅರಿಯಬೇಕು, ಹರಿಹರ ಕವಿಯ ಮುಕ್ತವಾಣಿಯಲ್ಲಿ !

ಭಕ್ತಿಯ ನಿಜಾವೇಶವನ್ನು ವರ್ಣಿಸುತ್ತಾ ಬಸವಣ್ಣನವರು,

"ಮನ ಮನ ಬೆರಸಿದಲ್ಲಿ ತನು ಕರಗದಿದ್ದಡೆ
ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿದ್ದಡೆ
ಕಂಡಾಗಳಶ್ರುಜಲಂಗಳು ಸುರಿಯದಿದ್ದಡೆ
ನುಡಿವಲ್ಲಿ ಗದ್ಗದಂಗಳು ಪೊಣ್ಮದಿದ್ದಡೆ
ಕೂಡಲಸಂಗಮದೇವರ ಭಕ್ತಿಗಿದು ಚಿಹ್ನೆ
ಎನ್ನಲ್ಲಿ ಇಲ್ಲವಾಗಿ ಆನು ಡಂಭಕ ಕಾಣಿರೋ"

ಎಂದು ಅಭಿಪ್ರಾಯಪಡುತ್ತಾರೆ.

ನಿಃಕಲವಾದ ಆತ್ಮರತಿಗೂ ವಿಕಲವಾದ ದೇಹರತಿಗೂ ಕೂದಲೆಳೆಯಷ್ಟೇ ಅಂತರ. ಅನುಭವ ಒಂದೇ, ನಿರ್ವೇದ ಒಂದೇ ಭಾವರಸಗಳ ಸಂಯೋಗವೂ ಒಂದೇ-ಆದರೆ ಒಂದರಲ್ಲಿ ನಿರ್ವಿಕಲ್ಪ, ಇನ್ನೊಂದರಲ್ಲಿ ಸವಿಕಲ್ಪ: ಒಂದರಲ್ಲಿ ತನ್ನತನದ ನೆನಹು, ಇನ್ನೊಂದರಲ್ಲಿ ತನ್ನತನದ ಮರಹು. ಅತೀತ ಭಕ್ತನು ಭಾವಾವೇಶಗಳ ಹೊನಲನ್ನು ದಾಟಿರುತ್ತಾನೆ. ಅವನು ಭಕ್ತಸ್ಥಿತಿಯನ್ನು ಮೀರಿ ಶರಣಪದಕ್ಕೇರಿರುತ್ತಾನೆ. ಹೊನ್ನು ಹೆಣ್ಣು ಮಣ್ಣುಗಳಿಗಾಗಿ ಅಳುವವರನ್ನು ನಾವು ಅಹರ್ನಿಶಿಯೂ ಕಾಣುತ್ತಿರುತ್ತೇವೆ. ಪರಮಾತ್ಮನಿಗಾಗಿ ಅಳುವವರನ್ನು ಕಾಣುವುದು ದುರ್ಲಭ. ಭಕ್ತಿಯ ರಸೋತ್ಕರ್ಷವನ್ನು ಬಸವಣ್ಣನವರು ವಿವರಿಸುತ್ತಾರೆ. ಆ ಅಂತಿಮದೆಸೆಗಾಗಿ ಅವರು

ಅನುಭವಿಸಿದ ಕಷ್ಟಸುಖಗಳು ನಮಗೆ ಕೈದೀಪವಾಗಿರುತ್ತವೆ.

''ಅಳಿಯೆರಗದನಿಲನಲುಗದ ರವಿಕರಂ ಪುಗದ
ಸುಳಿಗೊಂಡುದಳವೇರಿ ಹಸುರಳಿದು ಬೆಳಪುಳಿದ
ಸುರಚಿರಮೆನಿಪ್ಪ.''

ಬಗೆಬಗೆಯ ವಿಶಾಲ ಮೊಗ್ಗುಗಳನ್ನು ಸಂಗ್ರಹಿಸಿಕೊಂಡು, ಸಾಂದ್ರ ಸೌರಭ್ಯಮಯ ಪುಷ್ಪದಿಂದ ಸಂಗನನ್ನು ಸಿಂಗರಿಸಿ,

"ಪೂಜೆಯಂ ನೋಡಿ ಮೆಚ್ಚದೆ ಪೂಜೆಯಂ ಮಾಡಿ
ಓಜೆಗೆಟ್ಟಿರುಹಗೆಟ್ಟತಿಲಲ್ಲೆಯಂ ಮಾಡಿ
ನಯನಂಗಳೊಳು ಪೂಜೆ ಬರೆದಂತೆ ನೋಡುತಂ
ಭಯಭಕ್ತಿಯಿಂ ಪೂಜೆ ಮೆರೆವಂತೆ ಮಾಡುತಂ
ಚಿತ್ತದೊಳು ಪೂಜೆಯುಚ್ಚೊತ್ತಿದಂತರ್ಚಿಸುತೆ
ಚಿತ್ತದೊಳು ಪೂಜೆ ಪುಟ್ಟಿರ್ದಂತೆ ಈಕ್ಷಿಸುತೆ."

ಅಷ್ಟವಿಧಾರ್ಚನೆ ಷೋಡಶೋಪಚಾರ ಮಾಡಿ, ಶಿವತತ್ವ ಗೀತೆಯಪಾಡಿ, ಶಿವನ ಮುಂದೆ ಹಾಡಿ, ಆಡಿ, ಕೋಡಂಗಿಯಾಟವನಾಡಿ,

"ಇಂದುಧರನೊಳ್ ಸಲುಗೆಯಿಂ ಭಕ್ತಿಯಂ ಬೇಡಿ
ನಿಂದು ಭೀತಿಯ ತೋರಿ ತೊದಳಿಂದ ನುಡಿವುತಂ
ಸಂದ ಗದುಗದಿಕೆಯಿಂದಾನಂದವೇರುತಂ
ಪುಟವೆದ್ದು ಹೊಂಗುತಂ ದಳವೇರಿ ಹಿಗ್ಗುತಂ
ನಟ್ಟಿರ್ಪ ನೋಟದಿಂದೋಜೆಯಂ ಮೀರುತಂ
ಭವದಿಂದ ಹಿಗುತಂ ನೆನಹಿಂದ ಹಿಗ್ಗುತಂ
ಬೆವರುತಂ ಬಿಕ್ಕುತಂ ತೇಗುತಂ ತೂಗುತಂ
ಕ್ರಮವಳಿದು ಸುಳಿದು ಸುಖಿಯಾಗುತಂ ಬೀಗುತಂ
ನಮಿಸುತಂ ಕಂಪಿಸುತೆ ಮನವೊಲಿದು ಹೊಗಳುತಂ
ಪುಳಕಂಗಳಿದಿರೇರೆ ಸುಖಜಲಂ ಕಣ್‌ತೀವೆ
ಬೆಳೆವ ಗದುಗದವಲರೆ ಭಕ್ತಿ ಚಿತ್ತಮನೋವೆ
ಕಂಪಿಸುತೆ ನಡೆಯುಡುಗೆ ಮನವಕ್ಕರಿಂ ಕರಗೆ
ಜೊಂಪಿಸುತೆ ತನು ಜೋಲೆ ಸಾತ್ವಿಕರಸಂ ಮಸಗೆ
ಮಣಿಮಣಿದು ಕುಣಿಕುಣಿದು ಕೆಲೆಕೆಲೆದು ನಲಿದಾಡಿ
ತಣಿತಣಿದು ತಕ್ಕೈಸಿ ಮಿಕ್ಕು ಮಲೆ ಮಲೆದಾಡಿ
ಆಡುತಾಡುತ್ತಲ್ಲಿ ಪೊಗಳ್ವುದಂ ನೆರೆ ಮರೆದು
ನೋಡುನೋಡುತ್ತಲ್ಲಿ ನೋಟಮಂ ಮಿಗೆ ಮರೆದು



ಕಣ್ಮುಚ್ಚಿ ಗದುಗದಿಸಿ ಜೋಲ್ದು ಜೊಂಪಿಸಿ ಬಿದ್ದು
ಉಣ್ಮುವ ಶಿವಾನಂದರಸವ ಹೊನಲೊಳಗದ್ದು
ಈಸಾಡಿ ಗಂಗಾಧರನ ಚರಣಮಂ ಪಿಡಿದು
ಲೇಸಾಗಿ ಚಿತ್ತದೊಳ್ ಸಂಗನಂ ನೆರೆ ಪಿಡಿದು
ಮನದೊಳಚ್ಚೊತ್ತಿ ಸುಖಮೂರ್ತಿಯೋಳ್ ಸಂದಿರ್ದು
ಘನ ಸುಖದೊಳೆರಡಿಲ್ಲದೊಂದಲ್ಲದಿರುತಿರ್ದು
ನೆನೆದು ಚೇತರಿಸಿ ಮೆಲ್ಲನೆ ಮೆಲ್ಲನೆಚ್ಚತ್ತು
ಅನುಪಮಶಿವೈಕಸುಖಮುಖತೃಪ್ತಿಯಂ ಹೊತ್ತು
ಕಣ್ದೆರೆದು ಕುಳ್ಳಿರ್ದು ಸಂಗನಂ ನಡೆ ನೋಡಿ
ನುಣ್ದನಿಯೊಳರ್ಚನೆಯ ನೇಹಮಂ ಮಾತಾಡಿ
ಪಾದೋದಕಪ್ರಸಾದಂಗಳಂ ಕೈಗೊಂಡು
ಸಾದರಂ ಸಂಗನೊಲುಮೆಯನೊಚ್ಚತಂಗೊಂಡು
ದಿನದಿನಕೆ ಘಳಿಗೆಘಳಿಗೆಗೆ ಭಕ್ತಿಮಿಗಿಲಾಗೆ
ಅನುದಿನಂ ನೇಹವಿಮ್ಮಡಿಸಿ ನೂರ್ಮಡಿಯಾಗೆ
ಸಂಗನಾಮಂಗಳಂ ಪುರಜನಕೆ ಕಲಿಸುತಂ
ಸಂಗ ಶರಣೆಂದವರ ಪದತಳಕೆರಗುತಂ
ನಡೆವಲ್ಲಿ ನುಡಿವಲ್ಲಿ ಸಂಗ ಶರಣೆಂದೆನುತ
ಉಡುವಲ್ಲಿ ಉಂಬಲ್ಲಿ ಸಂಗ ಶರಣೆಂದೆನುತ
ಕೊಡುವಲ್ಲಿ ಕೊಂಬಲ್ಲಿ ಸಂಗ ಶರಣೆಂದೆನುತ
ತೊಡುವಲ್ಲಿ ಪೊದೆವಲ್ಲಿ ಸಂಗ ಶರಣೆಂದೆನುತ
ಸಂಗನಾಮದೊಳಚ್ಚು ವಿಡಿದು ಬೆಳೆವಂತಿರ್ದು
ಅಂಗವನಿತುಂ ಸಂಗನಂತರದೊಳೊಲಿದಿರ್ದು
ಪೊಗೊಯ್ವ ನಿಮಿಷವದು ಕಲ್ಪಕೋಟಿಗಳಾಗೆ
ರಾಗದಿಂದರ್ಚಿಸುವ ಕಲ್ಪಂ ನಿಮಿಷವಾಗೆ
ಕೊಡುವರ್ಘ್ಯವಣಿಧಾರೆ ಮರೆಯಾಗೆ ಹೆದರುತಂ
ನಡುವೆ ಹೂವಡ್ಡಮಿರೆ ನಡುಗಿ ಕೆಲಸಾರ್ಚುತಂ
ಪೂಜಿಸುವ ಕೈ ಸಡಿಲಲಮರ್ದಪ್ಪಿ ಕರಗುತಂ
ರಾಜಭೂಷಣನನಡಿಗಡಿಗಪ್ಪಿ ನೆರವುತಂ
ನೋಟ ವಕ್ರತೆಯೆಂದು ಮೈಯಿಕ್ಕಲಂಜುತಂ
ಪುಳಕಕ್ಕೆ ಪುರುಡಿಸುಷಂತೆ ಸೋಕಿ ಸುಖಿಯಾಗುತಂ
ಇಳಿವಶ್ರುಜಲಕೆ ಪುರುಡಿಸುವಂತೆ ನಡೆನೋಡುತಂ
ಗದ್ಗದವನೊಪ್ಪಿರಿಸಿ ಪೊಗಳೆ ಲಟಲಟಿಸುವಂ
ಉದ್ಗತಾನಂದಮಂ ನೂಂಕಿ ನೆನೆದುಬ್ಬುವಂ
ಶಿವಪೂಜೆಯೊಳಗೆ ಪುಟ್ಟಿದ ಸುಧಾಕರನಂತೆ
ಭವಪೂಜೆ ಬಲಿದು ಪುರುಷಾಕಾರವಾದಂತೆ
ಲಿಂಗ ಜಂಗಮವೋ ಮೇಣ್ ಜಂಗಮವೆ ಲಿಂಗವೋ

ಲಿಂಗ ಜಂಗಮವೆರಡು ಇಳೆಯೊಳು ವಿಭೇದವೋ
ಎಂಬಂತೆ ಸಾತ್ವಿಕ ಪ್ರಭು ಪೂಜಿಸುತ್ತಮಿರೆ
ಅಂಬಕತ್ರಯನ ಪುತ್ರಂ ಪೂಜಿಸುತ್ತಮಿರೆ
ಬಸವಣ್ಣನಪ್ರತಿಮನೊಲಿದು ಪೂಜಿಸುತ್ತಮಿರೆ
ಬಸವರಾಜಂ ಮೆಚ್ಚಿ ಪೂಜಿಸುತ್ತಿರೆಯಿರೆ."

ಭಕ್ತಿಯ ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ ಅವಸ್ಥೆಗಳನ್ನು ಬಸವಣ್ಣನವರು ದಾಟಿ ಮಹೋನ್ನತವಾದ ಮಧುರಸ್ಥಿತಿಯ ಹೊಸ್ತಿಲ ಮೇಲೆ ನಿಂತಿದ್ದಾರೆ. ಸಂಗನನ್ನು ದಾಸನಂತೆ' ಗೆಳೆಯನಂತೆ, ಪುತ್ರನಂತೆ, ಸೇವಿಸಿಯಾಯಿತು. ಆ ಅನುಭವ ಅವರನ್ನು ಪರಾಭಕ್ತಿಯ ಪರಾಕಾಷ್ಠ ದೆಸೆಯಾದ **ಶರಣಸತಿ [ಲಿಂಗಪತಿ]** ಮಧುರಸ್ಥಿತಿಗೆ ಒಯ್ದಿದೆ. ಮಾನವ ಸಂಬಂಧಗಳಲ್ಲಿ ಅತ್ಯಂತ ಹಾರ್ದಿಕಹಾದುದೆಂದರೆ ಸ್ತ್ರೀಪುರುಷ ಬಾಂಧವ್ಯ. ಇದರ ವಿದ್ಯುದಾವೇಗದಲ್ಲಿ ತನುಮನಗಳ ಪ್ರತಿಯೊಂದು ಕಣವು ಅದ್ಭುತ ಚೈತನ್ಯವನ್ನು ಪಡೆಯುತ್ತದೆ. ಕರಣಗಳು ಸದಾ ಜಾಗೃತವಾಗಿರುತ್ತವೆ. ಮಾನವ ತನ್ನತನವನ್ನು ಸಂಪೂರ್ಣವಾಗಿ ನೀಗಿಕೊಂಡ ಉರಿಗೆ ಸಿಕ್ಕಿದ ಕರ್ಪೂರದಂತೆ ಅವ್ಯಕ್ತದಲ್ಲಿ ವಿಲೀನನಾಗುತ್ತಾನೆ.

ಬಸವಣ್ಣನವರ ಆಧ್ಯಾತ್ಮಿಕ ಪ್ರಗತಿ ಅವರನ್ನು ಮಧುರಭಾವದ ಮಹಾಮನೆಯಲ್ಲಿ ತಂದು ನಿಲ್ಲಿಸುತ್ತದೆ. ಸಂಗನ ಸಹವಾಸದಲ್ಲಿ ಬಸವಣ್ಣನವರಿಗೆ ಲೋಕದ ಪರಿವೆಯೇ ಹೋಗಿಬಿಟ್ಟಿರುತ್ತದೆ. ದೇಹದ ಪರಿವೆಯಂತೂ ಇಲ್ಲವೇ ಇಲ್ಲ. ತಾವು ಮಹಾಪ್ರಧಾನಿಗಳು, ಸಿರಿಯರಸರು, ಲಕ್ಷಾಂತರ ಜನಗಳಿಗೆ ದಾಸೋಹ ಮಾಡಿಸುವ ಉದಾರ ಚಿತ್ತರು ಎಂಬ ಲೌಕಿಕ ಪ್ರತಿಷ್ಠೆ ನಿರಸನಗೊಂಡಂತೆ ಲೈಂಗಿಕಜ್ಞಾನವೂ ಹೋಗಿಬಿಟ್ಟಿರುತ್ತದೆ.

ಸಂಗ ಅರ್ಧನಾರೀಶ್ವರ. ಉಮೆ ಅವನ ಪ್ರಿಯತಮೆ ಮಾತ್ರವೇ ಅಲ್ಲ, ಅವನ ದೇಹ ಪ್ರಾಣಗಳ ಸಮಭಾಗವಾಗಿದ್ದಾಳೆ. ಶಕ್ತಿಯ ಮೊತ್ತದ ಘಟ್ಟಿಯೇ ಆದ ಉಮೆಯೇ ಹೆಣ್ಣಾಗಿ ಸಂಗನಲ್ಲಿ ಬೆರೆಯುವಾಗ ಉಳಿದವರ ಪಾಡೇನು? ಆ ಪರಮಪುರುಷನೆದುರಿಗೆ ಬೇರೆ ಯಾರು ಗಂಡಸರು? ತ್ರಿಲೋಕಗಳಲ್ಲಿಯೂ ಅವನೇ ಒಬ್ಬ ಪುರುಷ. ಉಳಿದ ಸಮಸ್ತ ಜೀವಕೋಟಿಯೂ ಅವನ ಪ್ರಕೃತಿ ಸ್ವರೂಪು. ಉಮೆ ಹೆಣ್ಣಾಗಿ ಸಂಗನನ್ನು ಆರಾಧಿಸಿ, ಪ್ರೇಮದ ಪವಿತ್ರ ಮಾರ್ಗದಲ್ಲಿ ಅವನನ್ನೇ ಸೇರಿದಂತೆ ನಿಜಭಕ್ತನೂ ಸೇರಬೇಕಾಗುತ್ತದೆ.

ಸಂಗನ ಸಂಗಿಯಾಗಿ ಬಸವಣ್ಣನವರು ತಮ್ಮ ಆರಾಧನೆಯನ್ನಾರಂಭಿಸುತ್ತಾರೆ.

"ಅಡಿಗಡಿಗೆ ಲಿಂಗವನರಿಯದರಿ ನೋಡಿ ನೋಡಿ



ಕಂಗಳು ಕಡೆಗೋಡಿವರಿದವು ಎನಗಯ್ಯಾ
ಎನ್ನಶ್ರುಜಲಂಗಳು ಆಲಿಕಲ್ಲರೂಹಿನಂತೆ
ಅರಗಿನ ಪುತ್ಥಳಿಯಂತೆ ತನು ಪುಳಕಿತವಾದ ಬೆಮರು ಬಿಂದುಗಳೆಲ್ಲ
ಕೂಡಲಸಂಗನ ದರ್ಶನಸ್ಪರ್ಶನದಿಂದ ಮನ ಒಲಿದು ನೆರೆವ ಭರವನೇನ
ಹೇಳುವೆನಯ್ಯಾ".

ಒಮ್ಮೆ ಈ ದರ್ಶನಸ್ಪರ್ಶನಾನುಭವವಾದ ಕೊಡಲೆ ಸತಿ ತನ್ನ ಪತಿಯನ್ನು ನಿರ್ದೇಶಿಸಿಕೊಳ್ಳುತ್ತಾಳೆ. ತನ್ನ ಕೌಮಾರಿಕಾವಸ್ಥೆಯಲ್ಲಿಯೆ ಸಂಗನನ್ನು ಸತಿ ಸ್ವಯಂವರ ಮಾಡಿಕೊಂಡಿರುತ್ತಾಳೆ.

"ಬಿಳಿಯ ಕರಿಕೆಯ ಕಣಿಗಲೆಲೆಯ
ತೊರೆಯ ತಡಿಯ ಮಳಲ ತಂದು
ಗೌರಿಯ ನೋನುವ ಬನ್ನಿರೇ
ಚಿಕ್ಕ ಚಿಕ್ಕ ಮಕ್ಕಳೆಲ್ಲರು ನೆರೆದು
ಅನುಪಮಧಾನಿ ಕೂಡಲಸಂಗಮದೇವ ಗಂಡನಾಗಬೇಕೆಂದು."

ಸ್ವಯಂವರ ಮುಚ್ಚಿಡುವ ವಿಷಯವಲ್ಲ. ತಾನು ಮಾಡಬಾರದುದನ್ನು ಮಾಡಿದ್ದೇನೆಂಬ ಕಳವಳ ಸತಿಯ ಹೃದಯವನ್ನು ಹೊಕ್ಕಿಲ್ಲ. ಆಕೆ ಗುರು ಹಿರಿಯರ ಬಲವಂತಕ್ಕೆ ಬೇಡದ ಗಂಡನನ್ನೂ ಕೂಡಿಲ್ಲ.

"ಜಗವೆಲ್ಲ ಅರಿಯಲು ಎನಗೊಬ್ಬ ಗಂಡನುಂಟು
ಆನು ಮುತ್ತೈದೆ, ಆನು ನೈಷ್ಠಿತೆ
ಕೂಡಲಸಂಗಯ್ಯನಂತಪ್ಪ ಎನಗೊಬ್ಬ ಗಂಡನುಂಟು."

ಸತಿ ತನ್ನ ಪತಿಯ ಬಹಳ ಅಭಿಮಾನವುಳ್ಳವಳು. ಅವಳ ಕಣ್ಣಿಗೆ ಅವನು ತ್ರಿಲೋಕಸುಂದರ. ಕಾಪಾಲಿಯಾಗಿ, ಸ್ಮಶಾನವಾಸಿಯಾಗಿ, ಪನ್ನಗಾಭರಣನಾಗಿ, ಲೋಕದ ಕಣ್ಣಿಗೆ ಭೀಭತ್ಸಮೂರ್ತಿಯಾಗಿದ್ದರೂ ಸತಿಯ ನರ್ಮನಯನಗಳಿಗೆ ಅವನು ಮನೋಹರ, ಅನುಪಮಸುಂದರ.

ಮನಕ್ಕೆ ಮನೋಹರನಲ್ಲದ ಗಂಡರು ಮನಕ್ಕೆ ಬಾರನು ಕೇಳವ್ವ ಕೆಳದಿ
ಪನ್ನಗಭೂಷಣನಲ್ಲದ ಗಂಡರು
ಇನ್ನೆನಗಾಗದವ್ವೋರೆ ನೋಡವ್ವ
ಕನ್ನೆಯಂದಿನ ಕೂಟ ಚಿಕ್ಕಂದಿನ ಬಾಳುವೆ, ನಿಮ್ಮಾಣೆಯಯ್ಯಾ
ಕೂಡಲಸಂಗಮದೇವಾ."

ಸರ್ವಸಂಗಪರಿತ್ಯಾಗ ಮಾಡಿದ ಸತಿಯ ಯೋಗಕ್ಷೇಮವನ್ನು ನೋಡಿಕೊಳ್ಳ

ವುದು ಪತಿಯ ಕರ್ತವ್ಯ. ಅವನನ್ನು ಸರ್ವಸ್ವವೆಂದು ಆಕೆ ನಂಬಿದ ಮೇಲೆ ಅವನೂ ಪ್ರೇಮದ ಕಟ್ಟಿಗೊಳಗಾಗುತ್ತಾನೆ. ಅವಳ ಕೈಹಿಡಿದು ಮುಂದಕ್ಕೆ ನಡಸಿಕೊಂಡು ಹೋಗುವ ಭಾರ ಅವನ ಮೇಲೆ ಬೀಳುತ್ತದೆ.

"ಸಂಸಾರವೆಂಬ ಶ್ವಾನವನೆಚ್ಚಿ ವಿಾಸಲು ಬೀಸರವ ಮಾಡದಿರಯ್ಯಾ
ಎನ್ನ ಚಿತ್ತವು ನಿಮ್ಮ ಧ್ಯಾನವಯ್ಯಾ
ನೀವಲ್ಲದೆ ಮತ್ತೇನನು ಅರಿಯೆನಯ್ಯಾ
ಕನ್ನೆಯಲ್ಲಿ ಕೈ ವಿಡಿದೆನು; ನಿಮ್ಮನ್ನು ನೆರೆದನು
ಮನ್ನಿಸು ಕಂಡಾ ಮಹಾಲಿಂಗವೇ
ಸತಿಯಾನು, ಪತಿ ನೀನಯ್ಯ
ಮನೆಯೊಡೆಯು ಮನೆಯ ಕಾಯ್ದಿಪ್ಪಂತೆ, ನೀನೆನ್ನ ಮನವನು ಕಾಯ್ದಿಪ್ಪ ಗಂಡನು
ನಿನಗೋತ ಮನವನನ್ಯಕ್ಕೆ ಹರಿಸಿದರೆ, ನಿಮ್ಮಭಿಮಾನಕ್ಕೆ ಹಾನಿ
ಕೂಡಲಸಂಗಮದೇವಾ."

ಸತಿ ತಾನು ಎಚ್ಚರ ತಪ್ಪದೆ ಪತಿಗೆ ಅವನ ಕಾಯಕದ ಎಚ್ಚರಗೊಡುತ್ತಾಳೆ. ಆದರೆ ಆ ಪತಿ ಸುಲಭಸಾಧ್ಯನಲ್ಲ, ಸುಲಭಸಂತೃಪ್ತನೂ ಅಲ್ಲ. ತನ್ನ ಸ್ವೇಚ್ಛಾ ವಿಹಾರದಲ್ಲಿ ಇರುಳು ಹಣತೆಯನ್ನು ಮಿಾಟುತ್ತ ಕುಳಿತಿರುವ ಸಾಧ್ವಿಯನ್ನು ಮರೆಯುತ್ತಾನೆ.

"ಅರಿಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು
ಪುರುಷನ ಒಲವಿಲ್ಲದೆ ಲಲನೆಯಂತೆ ಆಗಿದ್ದೆನಯ್ಯಾ
ವಿಭೂತಿಯನೆ ಪೂಸಿ ರುದ್ರಾಕ್ಷಿಯನೆ ತೊಟ್ಟು
ಶಿವ ನಿಮ್ಮ ಒಲವಿಲ್ಲದಂತೆ ಆನಿದ್ದೆನಯ್ಯಾ
ಕೆಟ್ಟು, ಬಾಳುವರಿಲ್ಲ ಎಮ್ಮ ಕುಲದಲ್ಲಿ
ನೀನೊಲಿದಂತೆ ಸಲಹಯ್ಯಾ ಕೂಡಲಸಂಗಮದೇವಾ."

ತಾನು ಸಿಂಗರಿಸಿಕೊಂಡು, ಪತಿಯ ಸೇವೆಗೆ ಮಾಡಿಕೊಂಡಿದ್ದ ಸಕಲ ಸನ್ನಾಹ ಗಳೂ ನಿರರ್ಥಕವಾದುವಲ್ಲಾ ಎಂಬ ಕೊರಗೇನೊ ಸತಿಯಲ್ಲಿ ಮೂಡಿದೆ. ಆದರೆ ಅವಳ ಅನನ್ಯಭಕ್ತಿ ಅವನ ಮೇಲೆ ತಪ್ಪು ಹೊರಿಸಲೊಪ್ಪಲೊಲ್ಲದು. ಅವನೇನು ಮಾಡಿದರೂ ಅದಕ್ಕೇ ಸೈ ಎನ್ನುತ್ತಾಳೆ. ತನ್ನ ಅಂತಸ್ತಾಪವನ್ನು ನುಂಗಿಕೊಂಡು ನಿನ್ನ ಚಿತ್ತ ಬಂದಂತೆ ಮಾಡು, ನೀನೊಲಿದಂತೆ ಸಲಹು ಎಂದು ಹೇಳುತ್ತಾಳೆ.
ಅವನು ಪರಾಙ್ಮುಖನಾದರೂ ಅದಕ್ಕೂ ಸತಿ ಒಂದು ಸಮಾಧಾನ ಹೇಳಿ ಕೊಳ್ಳುತ್ತಾಳೆ.

"ಎಲ್ಲರ ಗಂಡರ ಪರಿಯಂತಲ್ಲ ನೋಡವ್ವ



ನಮ್ಮ ನಲ್ಲನು ಸುಳಿಯಲಿಲ್ಲ
ಸುಳಿದು ಸಿಂಗಾರವ ಮಾಡಲಿಲ್ಲ
ಕೂಡಲಸಂಗಮದೇವನು ತನ್ನೊಳಗೆ ಬೈಚಿಟ್ಟನಾಗಿ."

ಸತಿಯ ಪ್ರೇಮನಿಷ್ಠೆ ಪತಿಯ ಪ್ರತಿಸ್ಪಂದನದ ಮೇಲೆ ಅವಲಂಬಿಸಿರಬಾರದೆಂದು ಬಸವಣ್ಣನವರ ಮತ. ಅವನೊಲವು ದೊರೆತರೆ ಒಳ್ಳಿತು, ದೊರೆಯದೆಂದು ತಾನು ವಿಮುಖಳಾಗಬಾರದು.

"ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ,
ಲಿಂಗದ ಮೇಲೆ ನಿಷ್ಠೆ ಇಲ್ಲದ ಭಕ್ತ,
ಇದ್ದರೇನೋ ಶಿವಶಿವಾ, ಹೋದರೇನೋ ಶಿವಶಿವಾ ?
ಕೂಡಲಸಂಗಮದೇವಯ್ಯ, ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ,"

ಇಂತಹ ನಿಸ್ಸೀಮಭಕ್ತಳನ್ನು ಸ್ವಾಮಿ ತಿರಸ್ಕರಿಸಲಾರ. ಅವನ ವಜ್ರ ಹೃದಯವನ್ನು ಅವಳ ಭಕ್ತಿಯ ಕುಸುಮಶರಗಳಿರಿಯುತ್ತವೆ. ಸತಿಯನ್ನು ಹಿಡಿದೆತ್ತಿ ಪ್ರೇಮದಿಂದ ಹೃದಯಕ್ಕೆ ಅಪ್ಪಿಕೊಳ್ಳುತ್ತಾನೆ. ಅವಳ ಜನ್ಮ ಪಾವನವಾಗುತ್ತದೆ.

"ಆಲಿಕಲ್ಲ ಹರಳಿನಂತೆ, ಅರಗಿನ ಪುತ್ಥಳಿಯಂತೆ
ತನು ಕರಗಿ ನೆರೆವ ಸುಖವ ನಾನೇಸೆಂಬೆ ?
ಕಡೆಗೋಡಿವರಿದವೆನಗಯ್ಯ ನಯನದ ಸುಜಲಂಗಳು
ನಮ್ಮ ಕೂಡಲಸಂಗಮದೇವರ ಮುಟ್ಟಿ ನೆರೆವ ಸುಖವ ನಾನಾರಿಗೇಸೆಂಬೆ ?"

ಇದು ಲೋಕಕ್ಕೆ ಡಂಗುರ ಸಾರುವ ಅನುಭವವಲ್ಲ. ಪತಿವ್ರತೆ ತನ್ನೀ ಸುಖವನ್ನು ಬೈಚಿಟ್ಟುಕೊಂಡು ಅನರ್ಘ್ಯರತ್ನದಂತೆ ಕಾಪಾಡುತ್ತಾಳೆ. ಆದರೇನು ? ದೀಪ್ತಿ ಅವಳ ದೇಹಾದ್ಯಂತವನ್ನೂ ಆವರಿಸುತ್ತದೆ. ಮುಖದಲ್ಲಿ, ನಯನದಲ್ಲಿ, ರೋಮ-ರೋಮಗಳಲ್ಲಿ ಅನನ್ಯ ಅನುಭವದ ಕಾಂತಿ ಚಿಮ್ಮುತ್ತಿರುತ್ತದೆ. ಪನ್ನೀರಿನಲ್ಲಿ ಮಿಂದು ಬಂದವನು ತನ್ನ ಜಳಕದ ವರ್ಣನೆ ಮಾಡಬೇಕಾಗಿಲ್ಲ, ಅದೇ ತನ್ನ ಕತೆಯನ್ನು ಸುರುತ್ತದೆ.

ಪತಿಗೃಹಕ್ಕೆ ಸತಿ ಹೊರಟಾಗಲೇ ತನ್ನ ಬಂಧು ಬಳಗ, ಇಷ್ಟಮಿತ್ರರನ್ನು ಮರೆಯಬೇಕಾಗಿರುತ್ತದೆ. ಪತಿಯ ಬಂಧುಗಳೇ ತನ್ನ ಬಂಧುಗಳು, ಪತಿಯ ಬಳಗವೇ ತನ್ನ ಬಳಗ. ಸಂಗನಷ್ಟು ಚಿತ್ತಸಮೀಪನೋ ಅವನ ಶರಣರೂ ಅಷ್ಟೇ ಸಮೀಪದವರಾಗಿರುತ್ತಾರೆ. ಅವರ ಒಲವೇ ಸಂಗನ ಒಲವು, ಅವರ ಮುನಿಸೇ ಸಂಗನ ಮುನಿಸು.

ಕಂಡರೆ ಮನೋಹರವಯ್ಯ
ಕಾಣದಿದ್ದರೆ ಅವಸ್ಥೆ ನೋಡಯ್ಯ
ಹಗಲಿರುಳಹುದು, ಇರುಳು ಹಗಲಹುದು
ಎಂತಯ್ಯ ? ಅಳವಾಡಿ ಕಳೆವೆನು
ಒಂದು ಜುಗ ಮೇಲೆ ಕೆಡೆದಂತೆ
ಕೂಡಲಸಂಗನ ಶರಣರನಗಲುವ ಧಾವತಿಯಿಂದ ಮರಣವೇ ಲೇಸು ಕಂಡಯ್ಯ.''
"ಬಂದಿಹೆನೆಂದು ಬಾರದಿದ್ದರೆ ಬಟ್ಟೆಗಳ ನೋಡುತ್ತ ಇದ್ದೆನಯ್ಯಾ
ಇನ್ನಾರನಟ್ಟುವೆ, ಇನಾರನಟ್ಟುವೆ, ಇನ್ನಾರ ಪಾದವ ಹಿಡಿವೆನಯ್ಯ
ಕೂಡಲಸಂಗನ ಶರಣರು ಬಾರದಿದ್ದರೆ, ಅಟ್ಟುವೆನೆನ್ನ ಪ್ರಾಣವನು.''

ಸಂಗ ಭಕ್ತಪ್ರಾಣಿ ಎಂಬುದನ್ನು ಭಕ್ತ ಬಲ್ಲ. ಅವನ ಶರಣರಲ್ಲಿ ಅವನಿಗೆ ಅತ್ಯಂತ ಮಮತೆ. ಭಕ್ತ ಶರಣರ ಛಾಯಾನುವರ್ತಿ. ಅವರು ಬಾರದಿದ್ದರೆ, ಕರೆ ತರುವುದಕ್ಕೆ ತನ್ನ ಪ್ರಾಣವನ್ನಟ್ಟಲು ಸಿದ್ಧನಾಗಿರುತ್ತಾನೆ.

"ಗಿಳಿಯು ಹಂಜರವಿಕ್ಕಿ, ಸೊಡರಿಂಗೆಣ್ಣೆಯು ನೆರೆದು,
ಬತ್ತಿಯನಿಕ್ಕಿ ಬರುವೆ ಹೇಳುತ್ತಿರ್ದೆನೆಲೆಗವ್ವಾ
ತರಗೆಲೆ ಗಿರಿಕೆಂದಡೆ, ಹೊರಗನಾಲಿಸುವೆ
ಅಗಲಿದೆನೆಂದೆನ್ನ ಮನ ಧಿಗಿಲೆಂದಿತೆಲೆಗವ್ವ
ಕೂಡಲಸಂಗನ ಶರಣರು ಬಂದು ಬಾಗಿಲ ಮುಂದೆ ನಿಂದು
"ಶಿವಾ'' ಎಂದೊಡೆ ಸಂತೋಷಬಟ್ಟೆನೆಲೆಗವ್ವ."

ಈ ಧಾವತಿಯಲ್ಲಿ ಲೋಕದ ಶಿಷ್ಟಾಚಾರಕ್ಕೆ ವಿರುದ್ಧವಾದ ನಡವಳಿಕೆಯನ್ನು ಕಂಡು ಕನಲಿ ಪ್ರಶ್ನಿಸಿದವರಿಗೆ,

''ಭಕ್ತಿರತಿಯ ವಿಕಳತೆಯ ಯುಕುತಿಯ ವಿನ ಬೆಸಗೊಂಬಿರಯ್ಯ ?
ಕಾಮಿಗೆ ಉಂಟೇ ಲಜ್ಜೆ ನಾಚಿಕೆ !
ಕಾಮಿಗೆ ಉಂಟೇ ಮಾನಾಪಮಾನವು;
ಕೂಡಲಸಂಗನ ಶರಣರಿಗೊಲಿದ ಮರುಳನೇನ ಬೇಸಗೊಂಬಿರಯ್ಯ ?"

ಎಂದು ಉತ್ತರ ಹೇಳುತ್ತಾರೆ.

(ಮುಂದುವರೆಯುತ್ತದೆ)

ಮೊಣಕಾಲುವರೆಗೆ ಬಗ್ಗಿ ಅನುಭವಿಸುವ ಶ್ರೀಮಂತಿಕೆಗಿಂತ ಎದೆಯೆತ್ತಿ ನಡೆವ ಸ್ವಾತಂತ್ರ್ಯ ಲೇಸು.

—ಕುವೆಂಪು



ಜೂನ್–84 ರ–ಸಂಚಿಕೆಯಿಂದ ಮುಂದುವರಿದ ಲೇಖನ

# ಗಮಕ ಪ್ರಚಾರ : ಚಂಪೂ ಕಾವ್ಯಗಳು

## ಗಮಕ ಶಿಕ್ಷಣ

—ಪಂ. ಚನ್ನಪ್ಪ ಎರೆಸೀಮೆ

ಗಮಕಿಗಳನ್ನು ಸೃಷ್ಟಿಸುವ ಕಾರ್ಯ ವ್ಯವಸ್ಥಿತ ಮತ್ತು ವ್ಯಾಪಕವಾಗಿ, ಶಾಸ್ತ್ರೀಯವಾಗಿ ಮೊದಲು ಆಗಬೇಕು. ಜಾನಪದ ವಿಭಾಗ, ಸಂಗೀತ ವಿಭಾಗಗಳಂತೆ 'ಗಮಕ' ವಿಭಾಗವನ್ನು ಸ್ನಾತಕೋತ್ತರ ಶಿಕ್ಷಣ ವಿಭಾಗದಲ್ಲಿ ತೆರೆದು ಶಿಕ್ಷಣವನ್ನು ಏಕೆ ಕೊಡಬಾರದು ? ಈ ಪ್ರಶ್ನೆಯ ಸಾಧಕ ಬಾಧಕಗಳನ್ನು ವಿಶ್ವವಿದ್ಯಾಲಯಗಳು ಚರ್ಚಿಸಲು ಅಖಿಲ ಕರ್ನಾಟಕ ಗಮಕ ಕಲಾ ಪರಿಷತ್ತು ಕೇಳಬೇಕೆಂದು ಆಶಿಸುತ್ತೇನೆ. ಗಮಕ ಕಲೆಯಲ್ಲಿ ಸ್ನಾತಕೋತ್ತರ ಪದವೀಧರರನ್ನು ಹೈಸ್ಕೂಲ್ ಕಾಲೇಜ್ ಟ್ರೈನಿಂಗ್ ಸೆಂಟರುಗಳಲ್ಲಿ ಗಮಕ ಶಿಕ್ಷಣ ತೆರೆದು ಉಪಾಧ್ಯಾಯರನ್ನಾಗಿ ಮಾಡಬಹುದು.

ಕರ್ನಾಟಕ ಸಾರಸ್ವತ ಪ್ರಪಂಚದ ಏಕೈಕ ಪ್ರತಿನಿಧಿಯಾಗಿ ಈಗ ಕಾರ್ಯಪ್ರವೃತ್ತವಾಗಿರುವ ಸಾಹಿತ್ಯ ಪರಿಷತ್ತು ಈಗ ನಡೆಯುವ ಗಮಕತರ ಗತಿಯಲ್ಲಿ ಎರಡು ಭಾಗ ಮಾಡಿ ಚಂಪೂ ಸಾಹಿತ್ಯ ಭಾಗಕ್ಕೆ ಪ್ರತ್ಯೇಕ ರಕ್ಷಣೆ ಕೊಡುವ ವ್ಯವಸ್ಥೆ ಮಾಡಬೇಕು. ಅದು ಎರಡು ವರ್ಷ ಅವಧಿಯದಾಗಿದ್ದು ಅದಕ್ಕಾಗಿ ಎರಡು ಪಠ್ಯ ಪುಸ್ತಕಗಳು ಸಿದ್ಧವಾಗಬೇಕು. ಪಂಪನಿಂದ ಇಂದಿನವರೆಗೆ ಬೆಳೆದು ಬಂದ ಚಂಪೂ ಗ್ರಂಥರಾಶಿಯೊಳಗಿಂದ ಗಮಕಕ್ಕೆ ಅರ್ಹವಾದ ಸಾಹಿತ್ಯಭಾಗಗಳನ್ನು ನಿರ್ವಿಕಾರ ಭಾವದಿಂದ ವಿಭಾಗ ವಿಭಾಗವಾಗಿ ಸಂಗ್ರಹಿಸಿ ಪ್ರತ್ಯೇಕ ಶಿರೋನಾಮೆ ಕೊಟ್ಟು ಸುಲಭವಾದುದನ್ನು ಮೊದಲ ವರ್ಷದ ಅಂಬೇಶಿಗೂ, ಕಠಿಣವಾದುದನ್ನು ಎರಡನೆಯ ವರ್ಷದ ತರಗತಿಗೂ ಪಠ್ಯಗ್ರಂಥವಾಗಿಸಬೇಕು. ವಿವಿಧ ಗ್ರಂಥಗಳಲ್ಲಿನ ಈ ಗಮಕ ಯೋಗ್ಯ ಭಾಗಗಳು ಸುಮಾರು ೨೫೦–೩೦೦ ಗಸ್ತು ಆಗಬೇಕು. ಇದು ಶಕ್ಯವಿದೆ. ಮುಖ್ಯವಾಗಿ ಈ ಗ್ರಂಥಗಳಲ್ಲಿ ಶ್ಲೇಷೆ, ವಿರೋಧಾಭಾಸ, ವಕ್ರೋಕ್ತಿ, ಚಿತ್ರಕವಿತ್ವ, ದೀರ್ಘದೀರ್ಘತರ ಸಮಸ್ತ ವಿಶಿಷ್ಟ ಗದ್ಯಭಾಗ, ಮತಪ್ರಕ್ರಿಯಾಭಾಗ, ಅನ್ಯಮತ ಖಂಡನೆ, ತಿರಸ್ಕಾರ ಭೂಯಿಷ್ಟ ಭಾಗಗಳನ್ನುಳಿದು ದೋಹದ, ಬಾಲಲೀಲೆ, ತಾಯಿ ಮಕ್ಕಳು, ಯುದ್ಧ, ಶೌರ್ಯ ವೀರ್ಯ ಪ್ರತಾಪ, ತ್ಯಾಗ, ವೈರಾಗ್ಯ, ನೃತ್ಯ, ಶೃಂಗಾರ, ಅನುರಾಗ, ಹಾಸ್ಯ,

ವಿನೋದ, ಮೃಗಯಾ, ಋತು ವೈಭವ, ತಪಸ್ಸು-ಇತ್ಯಾದಿಗಳ ಉತ್ತಮ ಕಾವ್ಯಾಂಶಗಳನ್ನು ಪಠ್ಯಗ್ರಂಥ ಒಳಗೊಂಡಿದ್ದರೆ ಬಹಳ ಕ್ಷೇಮ. ಪ್ರತಿಯೊಂದು ಭಾಗವೂ ಒಂದೂವರೆ ಘಂಟೆಯ ಅವಧಿಯ ಗಮಕಕ್ಕೆ ಸಾಕಾಗುವಷ್ಟಿರಬೇಕು. ದೀರ್ಘವಾಗಿದ್ದ ಗದ್ಯವನ್ನು ಕಥೆಗೆ ವಿಚ್ಛಿತ್ತಿ ಬಾರದಂತೆ ಸಂಗ್ರಹಿಸಬೇಕು. ಅಪರೂಪಕ್ಕೆ ಚಂಪೂ ಕವಿಗಳು ತಮ್ಮ ಗತ್ತುಗಾರಿಕೆ ತೋರಿಸಲು ಬಳಸಿರಬಹುದಾದ ತಾಳ ಲಯಬದ್ಧವಾಗಿ ಹೇಳಲು ಬರುವಂತಿರುವ ಪ್ರಮಾಣಿಕ, ಮಲ್ಲಿಕಾಮಾಲೆ, ಲಲಿತ, ಅಕ್ಕರಿಕೆ ಉತ್ಸಾಹ, ಲಯಗ್ರಾಹಿ, ಲಯೋತ್ತರ, ಲಲಿತಪದ, ಮಣಿಗಣ, ಪಂಚಚಾಮರ, ಅಂಗರುಚ, ತರಳ, ಭುಜಂಗ ಪ್ರಯಾತ, ವನಮಂಜರಿ, ಶಂಭುನಟನಾದಿಯಾದ ವೃತ್ತಗಳನ್ನು ಕೈಬಿಡಬಾರದು. ಈ ಛಂದಸ್ಸುಗಳ ಪದ್ಯಗಳು ಇವು ತಮ್ಮವೇ ಆದ ಗತ್ತುಗಾರಿಕೆಯಲ್ಲಿದ್ದು ಪ್ರತ್ಯುತ್ಪನ್ನಮತಿಗಳಾಗಿ ಹೇಳುವ ಗಮಕಿಗಳ ಕೌಶಲದ ಫಲವಾಗಿ ಕೇಳುವವರ ಆಸಕ್ತಿಯನ್ನು ಕೆರಳಿಸುವಂತೆ ಸಂಯೋಜಿತವಾದ ವೃತ್ತಗಳು. ಕವಿಗಳೂ ಇವನ್ನು ಅಪರೂಪವಾಗಿ ಬಳಸುವುದುಂಟು. ರಗಳೆಯ ಭಾಗಗಳು ದೀರ್ಘವಾಗಿದ್ದರೆ ಮೊಟಕುಗೊಳಿಸಿ ಅವಶ್ಯ ಸೇರಿಸಬೇಕು. ಹೀಗೆ ಸಂಗ್ರಹಿಸಿದ ಗ್ರಂಥಗಳ ಸೂಕ್ತ ಟಿಪ್ಪಣಿಗಳಿರಬೇಕು. ಈ ಗ್ರಂಥವನ್ನಧಿಕರಿಸಿ ವ್ಯವಸ್ಥಿತವಾದ ಎರಡು ವರ್ಷಗಳ ಗಮಕ ತರಗತಿ ನಡೆಸಿ, ಪರೀಕ್ಷೆ ಮಾಡಿ, ಉತ್ತೀರ್ಣರನ್ನು ಸನ್ಮಾನಿಸಿ, ಗಮಕ ಪ್ರಚಾರಕ್ಕೆ ಕಳಿಸಿಬೇಕು. ಈ ಕಾರ್ಯವನ್ನು ಸರಕಾರವೂ, ಪರಿಷತ್ತೂ ಗಂಭೀರವಾಗಿ ಯೋಚಿಸಿ ಕಾರ್ಯತತ್ಪರವಾದರೆ ಈ ದಿಸೆಯಲ್ಲಿ ಸೂಕ್ತ ಪ್ರಗತಿ ಸಾಧ್ಯ.

೨) ಗಮಕ ತರಗತಿಗೆ ಸೇರುವವರ ಕನಿಷ್ಠ ವಿದ್ಯಾಭ್ಯಾಸ ಪಿ.ಯು.ಸಿ. ಮಟ್ಟದ್ದಾಗಿರಬೇಕು. ಸಂಗೀತ ಜ್ಞಾನವಿದ್ದವರಿಗೆ ಆದ್ಯತೆಯಿತ್ತು ತರಗತಿ ನಡೆಸಿ ಮೊದಲ ವರ್ಷದ ಪರೀಕ್ಷೆಯಲ್ಲಿ ಪಾಸಾದವರನ್ನು ಪ್ರಾಥಮಿಕ ಶಾಲೆಗಳಲ್ಲೂ, ಎರಡನೆಯ ವರ್ಷದ ಗಮಕ ಪರೀಕ್ಷೆ ಪಾಸಾದವರನ್ನು ಹೈಸ್ಕೂಲ್ ಮತ್ತು ಟ್ರೈನಿಂಗ್ ಸ್ಕೂಲುಗಳಲ್ಲೂ ಗಮಕದ ಉಪಾಧ್ಯಾಯರನ್ನಾಗಿ ಮಾಡಬೇಕು. ಪ್ರಾಥಮಿಕ ಮತ್ತು ಹೈಸ್ಕೂಲ್‌ನಲ್ಲಿ ಭಾಷಾ ಬೋಧಕರಿಗೆ ಗಮಕ ಜ್ಞಾನದ ಸಾಮಾನ್ಯ ಪರಿಚಯವಾದರೂ ಇರಬೇಕು. ಇಲ್ಲದಿದ್ದರೆ ಪಠ್ಯಪಾಠ ಬೋಧನೆ ಯಶಸ್ವಿಯಾದೀತೆಂದು ನನಗನಿಸುವುದಿಲ್ಲ. ಅದಕ್ಕಾಗಿ ಸೂಕ್ತ ಏರ್ಪಾಡು ಅವಶ್ಯವೆನಿಸುತ್ತದೆ.

೩) ಪ್ರಾಥಮಿಕ ಶಾಲೆಯಲ್ಲಿ ೬-೭ ನೇ ತರಗತಿಯ ಭಾಷಾ ಪಠ್ಯಪುಸ್ತಕಗಳಲ್ಲಿ, ಹೈಸ್ಕೂಲು ಪಠ್ಯಪುಸ್ತಕದಲ್ಲಿ ಚಂಪೂಕಾವ್ಯದ ಸುಲಭ ಭಾಗಗಳು ಇನ್ನೂ ಹೆಚ್ಚಾಗಿ ಸೇರ್ಪಡೆಯಾಗಬೇಕು. ಹೈಸ್ಕೂಲಿನಲ್ಲಿ ಮೂರೂ ತರಗತಿಗೂ ಅನ್ವಯವಾಗುವಂತೆ ಚಂಪೂಕಾವ್ಯಗಳಿಂದ ಆಯ್ದ ಭಾಗಗಳ ಚಿಕ್ಕ ಪಠ್ಯಪುಸ್ತಕ ಪ್ರತ್ಯೇಕವಾಗಿದ್ದು, ಮೂರು ವರ್ಷಗಳ ಅವಧಿಯಲ್ಲಿ ವಿದ್ಯಾರ್ಥಿಗಳು ಐಚ್ಛಿಕವಾಗಿ ಗಮಕ



ಶಿಕ್ಷಣವನ್ನು ಓದುವುದಕ್ಕೆ ಸೂಕ್ತ ತಿದ್ದುಪಡಿ ಮಾಡಿದರೆ ಒಳ್ಳೆಯದು. ಈ ಕ್ರಮ ಪಿ.ಯು.ಸಿ. ಅಂತ್ಯದವರೆಗೂ ಬೆಳೆದುಬರಬೇಕು. ಮುಂದೆ ಕಾಲೇಜು ಶಿಕ್ಷಣದಲ್ಲಿ ಇದು ಐಚ್ಛಿಕ ವಿಷಯವಾಗಿ ಮುಂದುವರಿದರೆ ಲೋಕಕ್ಕೆ ಪ್ರಯೋಜನವಾದೀತೆಂಬುದು ನನ್ನ ಗ್ರಹಿಕೆ. ಯಾವುದೇ ಒಂದು ಕಲೆಯ ಅಭಿರುಚಿ ಬಾಲ್ಯದಿಂದಲೂ ಬೆಳೆದು ಬರುವಂತೆ ಮಾಡುವುದಕ್ಕೆತಕ್ಕ ಏರ್ಪಾಡು ಮಾಡುವುದು ಸಾರ್ವಜನಿಕರ ಶಿಕ್ಷಣತಜ್ಞರ ಅವಶ್ಯ ಕರ್ತವ್ಯವಾಗಿದೆ.

೪) ವಿಶ್ವವಿದ್ಯಾಲಯಗಳ ಮತ್ತು ಪದವೀಧರ ತರಗತಿಗಳ ಮಟ್ಟದಲ್ಲಿ ಇತ್ತೀಚಿಗೆ ಚಂಪೂಕೃತಿಗಳ ಪಠ್ಯಭಾಗ ಬಹಳ ಕಡಿಮೆಯಾಗಿದೆ. ಕಳೆದ ೪೦-೫೦ ವರ್ಷಗಳ ಹಿಂದೆ ಕನ್ನಡದ ಶ್ರೇಷ್ಠ ಚಂಪೂ ಕೃತಿಕಾರರ ಗ್ರಂಥಗಳಿಂದ ಆಯ್ದ ನಾನಾ ರೀತಿಯ ವರ್ಣನೆಯ ಗದ್ಯಪದ್ಯಭಾಗಗಳಿದ್ದ ಅಂದಿನ ಚಂಪೂಪಠ್ಯಭಾಗಕ್ಕೂ, ಇಂದಿನ ಪಠ್ಯ ಭಾಗಕ್ಕೂ ಬಹಳಷ್ಟು ವ್ಯತ್ಯಾಸ ತೋರಿ ಬರುತ್ತಿದೆ. ಈ ಹಂತದಲ್ಲಿ ಚಂಪೂ ಭಾಗ ಹೆಚ್ಚಾಗಬೇಕು. ಸ್ನಾತಕೋತ್ತರ ತರಗತಿಗಳಲ್ಲಿಯಂತೂ ಅವಶ್ಯ ಪ್ರಬುದ್ಧ ಚಂಪೂ ಕೃತಿಕಾರರ ಮುಖ್ಯವಾಗಿ ಪಂಪ, ರುದ್ರಭಟ್ಟ, ಜನ್ನ, ನಾಗವರ್ಮ, ನಾಗಚಂದ್ರ, ಹರಿಹರ, ಷಡಕ್ಷರದೇವರ ಕೃತಿಗಳ ಕನಿಷ್ಠ ಎಂಟು ಅಧ್ಯಾಯಗಳನ್ನಾದರೂ ಕೂಲಂಕಷವಾಗಿ ಸ್ನಾತಕೋತ್ತರರು ಓದಬೇಕು. ಈ ಮೊತ್ತದ ಚಂಪೂ ಭಾಗದ ಕೂಲಂಕಷ ಪರಿಚಯವಾದರೆ ಉಳಿದ ಚಂಪೂ ಕೃತಿಗಳ ಪರಿಚಯವಾದಹಾಗೆಯೇ. ನಮ್ಮ ಚಂಪೂಕೃತಿಗಳ ಆಳನೀಳಗಳ ಪರಿಚಯ ಅವರಿಗೆ ದಿಙ್ಮಾತ್ರವಾದರೂ ಆಗಬೇಕು. ಅದರ ಗುಟ್ಟು ಗೊತ್ತಾಗಬೇಕು. ಅವರ ಪ್ರತಿಮಾ ಕಲ್ಪನೆ, ತಮ್ಮ ವರ್ಣನೆಯ ಕಕ್ಷೆಗೆ ಬಂದ ವಸ್ತು ವಿಸ್ತಾರ ರೀತಿ, ಅಲ್ಲಿ ಅವರು ತೋರಿರುವ ಪ್ರತಿಭೆ, ಅಲಂಕಾರ ವೈಶಿಷ್ಟ್ಯ, ಕಲ್ಪನಾಲೋಕದ ವಿಹಾರದ ಬಗೆ, ಕಥೆಗೆ ಒಮ್ಮೊಮ್ಮೆ ಬೇಡವೆನಿಸಿದ್ದರೂ ಕೃತಕವೆನ್ನಬಹುದಾದರೂ, ವರ್ಣನಾ ವೈಶಿಷ್ಟ್ಯ ದೃಷ್ಟಿಯಿಂದ ಅವಶ್ಯ ಗ್ರಹಿಸಬೇಕಾಗಿರುವ ಅಷ್ಟಾದಶವರ್ಣನೆಗಳ ಸೊಗಸು ಸೌಂದರ್ಯ, ಕವಿ ಸಮಯ, ಪುರಾಣ ಕಥೆಗಳನ್ನು ಉಪಯೋಗಿಸಿಕೊಂಡು ಪ್ರಕೃತಿ ಸನ್ನಿವೇಶಗಳನ್ನು ವಿವಿಧ ಕಲ್ಪನೆಗಳನ್ನನುಸರಿಸಿ ಅಭಿವ್ಯಕ್ತಗೊಳಿಸಿರುವ ರೀತಿನೀತಿ –ಇವೆಲ್ಲ ವಿಶ್ವವಿದ್ಯಾನಿಲಯಗಳಿಂದ ಹೊರಬರುವವರಿಗೆ ಗೊತ್ತಾಗದಿದ್ದರೆ ಕನ್ನಡ ಕಾವ್ಯಾಭ್ಯಾಸವನ್ನೆಲ್ಲ ಪೂರ್ಣಗೊಳಿಸಿದವರೆಂದು ಕರೆಯುವುದಾದರೂ ಹೇಗೆ ? ತಲೆಮಾರಿನಿಂದ ತಲೆಮಾರಿಗೆ ಹೀಗೆ ವಿದ್ವತ್ತು ಕುಸಿಯುತ್ತಾ ಹೋದರೆ ಗತಿಯೇನು ? ನಮ್ಮ ವಿದ್ವಾಂಸರು ಪಂಪ-ರುದ್ರಭಟ್ಟ-ಷಡಕ್ಷರರ ಕವಿ ಕಾವ್ಯಗಳ ಬಗ್ಗೆ ವಿಸ್ತಾರ ಪ್ರಬಂಧ ಬರೆಯಬಹುದು. ಗ್ರಂಥಸ್ಥ ವಿಷಯ ಕುರಿತು ಹತ್ತಾರು ಪದ್ಯಗಳ ವ್ಯಾಖ್ಯಾನ ಮಾಡುವ ಸಮಯದಲ್ಲಿ ಅಪ್ರತಿಭರಾಗಿ ನಿಂತುಬಿಡುತ್ತಾರೆ. ಹೀಗಾಗಬಾರದೆಂದೇ ನಮ್ಮ ಭಾವನೆ. ಹಳೆಯ ತಲೆಮಾರಿನ ನಮ್ಮ ವಿದ್ವಾಂಸರುಗಳಾದ ಬಿ. ಎಂ. ಶ್ರೀ, ಟಿ. ಎಸ್. ವೆಂಕಣ್ಣಯ್ಯನವರು, ತಿ ನಂ.ಶ್ರೀ.

ದೊ.ಲ.ನ. ವೀ.ಸೀ. ಇನ್ನೂ ಜೀವಂತವಾಗಿರುವ ಡಾ॥ ಮುಗಳಿ ಮೊದಲಾದ ಹಿರಿಯರು ಚಂಪೂ ಕೃತಿಗಳ ಕೂಲಂಕಷ ಅಭ್ಯಾಸದ ಬಗೆಗೆ ವಿಶೇಷ ಗೌರವಾದರವುಳ್ಳವರಾಗಿದ್ದರೆಂಬುದನ್ನು ಜ್ಞಾಪಿಸಲು ಸಂತೋಷವಾಗುತ್ತದೆ. ಬಿ.ಎಂ.ಶ್ರೀಯವರು ನೂರಾರು ಚಂಪೂ ಕೃತಿಗಳ ಭಾಗಗಳನ್ನು ತಮ್ಮ ಭಾಷಣಗಳಲ್ಲಿ ಉದ್ಧರಿಸಿ ಮೈಮರೆಯುತ್ತಿದ್ದರು.

೫) ಆಕಾಶವಾಣಿಯವರು ತಿಂಗಳಿಗೆ ಒಂದಾದರೂ ಸರಿಯೆ ಯೋಗ್ಯ ಚಂಪೂ ಭಾಗಗಳ ಗಮಕಪ್ರಸಾರ ಕಾರ್ಯವನ್ನು ಅರ್ಹರಾದ ಗಮಕಿಗಳಿಂದ ನಿಯೋಜಿಸಿ ಪ್ರಸಾರಗೊಳಿಸಬೇಕು. ಈಗಿನಂತೆ ಕಾವ್ಯವಾಚನ ಕಾರ್ಯಕ್ರಮವೆಂದೊಡನೆ ಮೂಗು ಮುರಿದು ಬೇರೆ ಕಾರ್ಯಕ್ರಮಕ್ಕಾಗಿ ಗುಂಡಿಯನ್ನು ತಿರುಗಿಸುವಂತಾಗಬಾರದು. ಜನತೆಯ ಯೋಚನೆಯ ಅಭಿರುಚಿಯ ಮಟ್ಟವನ್ನು ದಶದಿಕ್ಕುಗಳಿಂದ ಮೇಲಕ್ಕೆತ್ತುವ ಕಾರ್ಯ ಎಲ್ಲ ವಿಚಾರವಾದಿಗಳಿಂದಲೂ ಆಗಬೇಕು. ಜನದ ಮಟ್ಟಕ್ಕೇ ಎಲ್ಲವನ್ನು ಇಳಿಸುತ್ತ ಬಂದರೆ ಉತ್ತಮ ಚಿಂತನಶೀಲ ವಿಷಯಗಳಿಗೂ ಜನಕ್ಕೂ ಬಹಳ ಅಂತರ ಬೆಳೆಯಬಹುದು. ಪರೀಕ್ಷೆಯ ಮಟ್ಟಕ್ಕೆ ವಿದ್ಯಾರ್ಥಿಗಳನ್ನೇರಿಸಬೇಕು. ವಿದ್ಯಾರ್ಥಿ ಮಟ್ಟಕ್ಕೇ ಪರೀಕ್ಷೆಯನ್ನಿಳಿಸಿದರೆ ಗತಿಯೇನು ? ಇಂಥವೆಲ್ಲ ಅಪಾಯಕಾರೀ ಬೆಳವಣಿಗೆಗಳೇ ಎನ್ನದೆ ವಿಧಿಯಿಲ್ಲ. ಆಕಾಶವಾಣಿಯಲ್ಲಿ ಬಹಳಷ್ಟು ಕಾಲವನ್ನು ಚಿತ್ರಗೀತೆಗಳು ತಿಂದು ಹಾಕುತ್ತವೆ. ಒಂದು ಮಾತು, ಮನೆಯ ಮಾತು–ಇಂಥ ಕೆಲವು ಯಾವ ಪುರುಷಾರ್ಥವೂ ಇಲ್ಲದ ಕಾರ್ಯಕ್ರಮಗಳು ಕೆಲವು ಕಾಲವನ್ನು ನುಂಗುತ್ತವೆ. ಇಂಥ ಕಾರ್ಯಕ್ರಮಗಳನ್ನು ಸ್ವಲ್ಪ ಮೊಟಕುಗೊಳಿಸಿ, ಆ ಕಾಲವನ್ನು ಮಹಾಕವಿಗಳ ಕೆಲವು ಉಪಯುಕ್ತ ಚಂಪೂ ಕಾವ್ಯ ಭಾಗಗಳ ಪ್ರಚಾರಕ್ಕೆ ಉಪಯೋಗಿಸಿದರೆ ಉತ್ತಮವಾದೀತು. ಇದನ್ನು ಆಕಾಶವಾಣಿ ಸಲಹಾ ಮಂಡಳಿ ಯೋಚಿಸಲಿ.

೬) ಪ್ರಾಥಮಿಕ ಶಾಲಾ ಮಟ್ಟದಿಂದಲೇ ಕಾವ್ಯವಾಚನ ಕಲೆಯ ಅಭಿರುಚಿಯನ್ನು ಬೆಳೆಸುವ ದೃಷ್ಟಿಯಿಂದ ಪದ್ಯ ಪಾಠವನ್ನು ಪರಿಣಾಮಕಾರಿಯಾಗಿ ಉಪಾಧ್ಯಾಯರು ಮಾಡಿದರೆ ಅದು ಸಾಧ್ಯ. ಹಾಗೆ ಮಾಡಬೇಕಾದರೆ ಸ್ವಲ್ಪ ಪ್ರಮಾಣದಲ್ಲಾದರೂ ಭಾವಪೂರ್ಣವಾಗಿ ಅರ್ಥಪೂರ್ಣವಾಗಿ ಉಪಾಧ್ಯಾಯರು ಪದ್ಯ ಪಾಠ ಬಲ್ಲವರಾಗಿರಬೇಕು. ಎಷ್ಟೋಜನ ಶಿಕ್ಷಕ ಶಿಕ್ಷಕಿಯರಿಗೆ ಇದರ ಗಂಧವೂ ಇರುವುದಿಲ್ಲ. ಅವರೂ ಪದ್ಯ ಪಾಠ ಮಾಡುತ್ತಾರೆ. ಇಂಥವರಿಗೆ ಶಿಕ್ಷಕ ತರಬೇತಿ ಕೇಂದ್ರದಲ್ಲಿ ಯೋಗ್ಯ ಗಮಕಗಳಿಂದ ವಿವಿಧ ಪದ್ಯಭಾಗಗಳನ್ನು ಗಮಕಗತಿಯಲ್ಲಿ ಹೇಗೆ ಹೇಳಬೇಕೆಂಬ ಶಿಕ್ಷಣ ಅವಶ್ಯಕವಾಗಿದೆ. ಈ ಬಗ್ಗೆ ಶಿಕ್ಷಣತಜ್ಞರು ಗಂಭೀರವಾಗಿ ಯೋಚನೆ ಮಾಡಬೇಕು.

೭) ಈಗಿನಂತೆ ಅಥವಾ ಇನ್ನೂ ಅಧಿಕವಾಗಿ ಪ್ರತಿ ವರ್ಷ ನಡೆಯುವ ಕನ್ನಡ



ಸಾಹಿತ್ಯ ಸಮ್ಮೇಳನದಲ್ಲಿ ಗಮಕಗೋಷ್ಠಿಯ ವ್ಯಾಪಕ ಕಾರ್ಯಕ್ರಮಗಳನ್ನು ರೂಪಿಸಿ, ಗಮಕಿಗಳೂ, ಗಮಕ ಕಲಾಭಿಮಾನಿಗಳು, ಕವಿಗಳೂ ಒಂದೆಡೆ ಸೇರಿ, ಈ ಕಲೆಯ ಉಜ್ಜೀವನ, ಆಗುಹೋಗುಗಳು, ಪ್ರಚಾರ ಮಾಧ್ಯಮ ರೀತಿನೀತಿಗಳ ಬಗೆಗೆ ಇತೋಪ್ಯತಿಶಯ ಲಕ್ಷ್ಯ ಕೊಡಬೇಕಾದುದು ಅವಶ್ಯಕವಾಗಿದೆ. ಆ ಗದ್ದುಗೆಯೇರಿ ಕೂಗಿದ ಕೂಗು ಸರಕಾರದ ಸಾರ್ವಜನಿಕರ ಗಮನ ಸೆಳೆಯುವ ಪ್ರಮುಖ ಪ್ರಚಾರ ಸಾಧನವಾಗಿದೆ.

ಈವರೆಗೆ ಕೆಲವು ನನ್ನ ಅನಿಸಿಕೆಗಳನ್ನು ತಿಳಿಸಿದ್ದೇನೆ. ಕಾರ್ಯರೂಪಕ್ಕೆ ಇವನ್ನು ತರುವಲ್ಲಿ ನಾಡು-ನುಡಿ-ಸಂಸ್ಕೃತಿಯ ಅಭಿಮಾನಿಗಳು ಒಂದೆಡೆ ಕಲೆತು ಸಾಧಕ-ಬಾಧಕಗಳನ್ನು ವಿಚಾರಿಸಿ ಸೂಕ್ತವಾದುದನ್ನು ಕಾರ್ಯರೂಪಕ್ಕೆ ತರಬೇಕು.

ಸತ್ಕಾವ್ಯ ಜನಜೀವನವನ್ನು ಸಂತೋಷ ಚಿತ್ತರನ್ನಾಗಿಸುವ, ಸೌಮನಸ್ಯರನ್ನಾಗಿಸುವ ಸಾಧನೆಗಳಲ್ಲೊಂದಂತೂ ನಿಜ. ಅವು ನಮ್ಮ ಮನೋ ಮಾಲಿನ್ಯವನ್ನು ನಿವಾರಿಸಿ, ಉಲ್ಲಾಸಗೊಳಿಸಿ ನೂತನ ರಸಲಾಭವನ್ನು ನಮಗೆ ತಂದುಕೊಡುತ್ತವೆ. ಮನುಷ್ಯ ಜೀವನದ ಐಶ್ವರ್ಯವೆಲ್ಲ ರಸಸ್ತರದಲ್ಲಿಯದು. ಏಕೆಂದರೆ 'ರಸೋವೈಸಃ' ಆದ್ದರಿಂದ ನಮ್ಮ ಉದ್ದಾಮ ವೈಚಾರಿಕ ಪ್ರಜ್ಞೆಯ ಮುನಿ-ಸಂತ-ಶರಣ-ಯೋಗಿ-ಕವಿ ರಸಋಷಿಗಳು ಕಂಡ ಹೃದಯದ ಬೆಳಕಿನದು. ಆ ಬೆಳಕು ಲೋಕಕ್ಕೆ ತನ್ನಿಂದ ತಾನೆ ಪ್ರಸಾರಗೊಳ್ಳುವುದಿಲ್ಲ. ಬೆಳಗುತ್ತಿರುವ ಹಣತಿಯ ದೀಪ ಕೇವಲ ಎಣ್ಣೆ ಬತ್ತಿಗಳಿರುವ ಇನ್ನೊಂದು ಹಣತೆಗೆ ಹೋಗಿ ಮುಡಿಸಿದಂತೆ. ಅಪ್ರಾಕೃತರಿಂದ ಪ್ರಾಕೃತರಿಗೆ, ತಿಳಿದವರಿಂದ, ತಿಳಿಯದವರಿಗೆ ಆ ರಹಸ್ಯ ಪರಂಪರೆ ಕಾಲಕಾಲಕ್ಕೂ ಹಿಂದೆ ಬೆಳೆದು ನಿಂತ ಜ್ಞಾನ– ಬೆಳೆಯುತ್ತಿರುವ ಜ್ಞಾನ ಬೆಳೆಯಬಹುದಾದ ಜ್ಞಾನ ಹರಿಹರಿದು ಬರಬೇಕು. ಕಾರ್ಯಗತ ರಸಜ್ಞಾನ ಗಂಗೆ ಗಮಕಿಯಿಂದ ಹರಿಯಬೇಕು. ತಾನು ಅನುಭವಿಸಿದ ರಸಲಾಭ ಎಲ್ಲ ರಸಲಾಭವಾಗಬೇಕು. ಇದಕ್ಕೆ ಎಲ್ಲರ ವಿದ್ಯಾಸಾಧನೆಗಳಂತೆ ದೀರ್ಘ ಕಾಲದ ತಪಸ್ಸು ಗಮಕಿಗೆಬೇಕು. ಉತ್ತಮ ಶಾರೀರ ಸಂಪತ್ತು ಬೆಳೆಸಿಕೊಳ್ಳಬೇಕು. ಇದು ಮೊದಲ ಜೀವಾಳ. ಕಾವ್ಯಾಭ್ಯಾಸ ಸಂಜನಿತ ಸಂಸ್ಕಾರ ವಿಶೇಷ, ಸಂಗೀತಶಾಸ್ತ್ರ ಜ್ಞಾನ, ಸಹೃದಯತೆ, ಮುಂತಾದ ಶಕ್ತಿ ಸಂಪನ್ನತೆಗಳಿಂದ ಕಲಾಪ್ರೌಢನೆನಿಸಿ, ಈ ಶ್ರೇಷ್ಠ ಸಂಸ್ಕೃತಿಯ ಹರಿಕಾರನೆನಿಸಬೇಕು. ಅಂಥ ಶಕ್ತಿಯನ್ನು ಈಶ್ವರ ಗಮಕಿಗಳಿಗೂ ಕೊಡಲೆಂದು ಹಾರೈಸುತ್ತೇನೆ. ●

---

ಗಾಂಧಿಯೆಂಬಾ ಪೆಸರೆ ನಾಂದಿಯಾಗಲಿ
ನಮ್ಮ ಸ್ವಾತಂತ್ರ್ಯ ಸಂಭ್ರಮಕೆ ಹಾಡುಪಕ್ಷಿ. —ಕುವೆಂಪು

---

# ಪುರಾಣ ಮುನಿಗಳು—೭

## ಗೌತಮ

—ಪ. ರಾಮಕೃಷ್ಣಶಾಸ್ತ್ರಿ

ದೀರ್ಘತಮನೆಂಬ ಋಷಿ ಣಿ ಪ್ರದ್ವೇಷಿಣಿ ಎಂಬವಳಲ್ಲಿ ಜನಿಸಿದ ಮಗನೇ ಗೌತಮ. ಸಪ್ತರ್ಷಿಗಳಲ್ಲಿ ಒಬ್ಬನಾದ ಆತ ಗೋತ್ರಪ್ರವರ್ತಕನೆಂಬ ಗೌರವಕ್ಕೆ ಪಾತ್ರನಾದ. ಬ್ರಹ್ಮದೇವನು ಪ್ರಪಂಚದ ಸ್ತ್ರೀಯರೆಲ್ಲರ ಸೌಂದರ್ಯವನ್ನೂ ಒಂದುಗೂಡಿಸಿ, ಅಹಲ್ಯೆ ಎಂಬ ಚೆಲುವಾದ ತರುಣಿಯನ್ನು ಸೃಷ್ಟಿಸಿದ. ಅವಳನ್ನು ಮದುವೆಯಾಗಲು ನಾಮುಂದು ತಾಮುಂದು ಎಂದು ದೇವತೆಗಳೂ, ಗಂಧರ್ವರೂ, ಋಷಿಗಳೂ ಬಂದರು.

ಆಗ ಬ್ರಹ್ಮನು ಗೌತಮನನ್ನು ಬಳಿಗೆ ಕರೆದು, "ಅಯ್ಯಾ, ಅವಿವಾಹಿತೆಯಾದ ಅಹಲ್ಯೆಯನ್ನು ನಿನ್ನ ಆಶ್ರಮಕ್ಕೆ ಕರೆದುಕೊಂಡು ಹೋಗಿ ರಕ್ಷಿಸಿಕೊಂಡಿರು" ಎಂದನು. ತನ್ನ ಬ್ರಹ್ಮಚರ್ಯವನ್ನು ಪರೀಕ್ಷಿಸಲು ಬ್ರಹ್ಮನು ಸುಂದರ ಸ್ತ್ರೀಯನ್ನು ತನ್ನೊಂದಿಗೆ ಕಳುಹಿಸುತ್ತಿದ್ದಾನೆಂದು ಗೌತಮನ ಬುದ್ಧಿಗೆ ಹೊಳೆಯಿತು. ಆದರೂ ಬ್ರಹ್ಮನ ಆಜ್ಞೆಗೆ ಶಿರಬಾಗಿ ಅವಳನ್ನು ತನ್ನ ಆಶ್ರಮಕ್ಕೆ ಕರೆದುಕೊಂಡು ಹೋಗಿ ಬ್ರಹ್ಮನು ಕೇಳಿದಾಗ ಅಹಲ್ಯೆಯನ್ನು ಆತನ ವಶಕ್ಕೆ ಹಿಂತಿರುಗಿಸಿದ. ಆದರೆ ಆ ಅವಧಿಯಲ್ಲಿ ಗೌತಮ ಅಹಲ್ಯೆಯ ದೇಹ ಸ್ಪರ್ಶಿಸುವುದು ಹಾಗಿರಲಿ, ತಲೆಯೆತ್ತಿ ಅವಳತ್ತ ನೋಡಿರಲಿಲ್ಲ. ಇಂತಹ ನಿಷ್ಕಲಂಕ ತಪಸ್ವಿಯೇ ಅಹಲ್ಯೆಗೆ ತಕ್ಕ ಪತಿ ಎನಿಸಿತು ಬ್ರಹ್ಮನಿಗೆ.

ಆದರೆ ದೇವತೆಗಳಿಗೆ ಅಹಲ್ಯೆಯ ಮೇಲೆ ಮೋಹವಿತ್ತಲ್ಲ. ಆದ್ದರಿಂದ ಬ್ರಹ್ಮನು "ಮೂರು ಸಲ ಭೂಮಂಡಲವನ್ನು ಪ್ರದಕ್ಷಿಸಿ ಮೊದಲು ಬಂದವರಿಗೆ ಅಹಲ್ಯೆಯನ್ನು ಧಾರೆಯೆರೆಯುತ್ತೇನೆ" ಎಂದ. ಎಲ್ಲರೂ ಅವರವರ ವಾಹನಗಳನ್ನೇರಿ ಭೂ ಪ್ರದಕ್ಷಿಣೆಗೆ ತೆರಳಿದರು. ಗೌತಮ ಹಾಗೆ ಮಾಡಲಿಲ್ಲ. ಅವನ ಆಶ್ರಮದಲ್ಲಿ ದೇವಲೋಕದ ಕಪಿಲಾ ಎಂಬ ಹಸುವಿತ್ತು. ಗರ್ಭಿಣಿಯಾದ ಅದು ಆಗತಾನೇ ಪ್ರಸವಿಸುತ್ತಿತ್ತು.

ಗೌತಮ ಆಗ ಆ ಹಸುವಿಗೆ ಮೂರುಸಲ ಪ್ರದಕ್ಷಿಣೆ ಹಾಕಿದ. "ಬ್ರಹ್ಮದೇವಾ, ಪ್ರಸವಿಸುತ್ತಿರುವ ಹಸುವಿಗೆ ಮೂರು ಸಲ ಪ್ರದಕ್ಷಿಣೆ ಬಂದರೆ ಅಷ್ಟು ಸಲ ಭೂ ಪ್ರದಕ್ಷಿಣೆ ಬಂದುದಕ್ಕೆ ಸಮಾನವೆಂದು ಶಾಸ್ತ್ರಗಳು ಸಾರಿವೆ. ಆದ್ದರಿಂದ ಅಹಲ್ಯೆಯನ್ನು ನನಗೆ ಮದುವೆ ಮಾಡಿ ಕೊಡು" ಎಂದು ಕೋರಿದ.



ಅಹಲ್ಯೆ ಗೌತಮನ ಸತಿಯಾದರೂ ಇಂದ್ರನಿಗೆ ಅವಳ ಮೇಲಿನ ಮೋಹ ತಗ್ಗಲಿಲ್ಲ. ಒಂದು ದಿನ ಬೆಳಗಾಗುವ ಮೊದಲೇ ಗೌತಮನ ಆಶ್ರಮದ ಹೊರಗೆ ನಿಂತು ಕೋಳಿಯಂತೆ ಕೂಗಿದ. ಬೆಳಗಾಯಿತೆಂದು ಭಾವಿಸಿ ಗೌತಮನು ಎದ್ದು ಸ್ನಾನಕ್ಕಾಗಿ ನದಿಯ ಕಡೆಗೆ ಹೊರಟ. ಆಗ ಇಂದ್ರನು ಗೌತಮನ ವೇಷದಲ್ಲಿ ಆಶ್ರಮದೊಳಗೆ ಬಂದು, "ಪ್ರಿಯೆ, ಇನ್ನೂ ಬೆಳಗಾಗಿಲ್ಲ. ಹಾಳು ಕೋಳಿ ತಪ್ಪಾಗಿ ಕೂಗಿತು" ಎಂದು ಹೇಳಿ, ಕಪಟವರಿಯದ ಹೆಣ್ಣು ಅಹಲ್ಯೆಯ ಪಾವನ ದೇಹವನ್ನು ಕಲುಷಿತಗೊಳಿಸಿದ.

ಆಗ ಆಶ್ರಮಕ್ಕೆ ಹಿಂತಿರುಗಿದ ಗೌತಮನಿಗೆ ಇಂದ್ರನ ಮೋಸ ತಿಳಿಯಿತು. ಅವನು ಇಂದ್ರನ ಮೈಯಲ್ಲಿ ಸಾವಿರ ಕಣ್ಣುಗಳಾಗಲೆಂದೂ ಅಹಲ್ಯೆಯು ಕಲ್ಲಾಗಲೆಂದೂ ಶಪಿಸಿದ. ಮುಂದೆ ರಾಮನ ಪಾದಸ್ಪರ್ಶದಿಂದ ಪುನೀತಳಾದ ಮೇಲೆ ಸತಿಯನ್ನು ಸ್ವೀಕರಿಸಿದ.

ಗೌತಮನಿಗೆ ಒಮ್ಮೆ ಸ್ವರ್ಗಕ್ಕೆ ಹೋಗಬೇಕೆನಿಸಿದಾಗ ಇದಕ್ಕೆ ಏನು ಮಾಡಬೇಕೆಂದು ಯಮನೊಂದಿಗೆ ಕೇಳಿದ. ಅದಕ್ಕೆ ಯಮನು, "ತಾಯಿ ತಂದೆಗಳ ಸೇವೆ ಮಾಡಿದರೆ ಸುಲಭದಲ್ಲಿ ಸ್ವರ್ಗ ಪ್ರಾಪ್ತಿಯಾಗುತ್ತದೆ. ಆದರೆ ಪುತ್ ಎಂಬ ನರಕದಿಂದ ಪಿತೃಗಳನ್ನು ಉದ್ಧರಿಸಲು ಪುತ್ರರನ್ನು ಪಡೆದರೆ ಮಾತ್ರ ಸ್ವರ್ಗ ಸಿಗಬಹುದು" ಎಂದನು.

ಗೌತಮ ಭಕ್ತಿಯಿಂದ ತಾಯಿ-ತಂದೆಗಳನ್ನು ಸೇವಿಸಿದ. ಒಂದು ಸಲ ಕಾಡಿನಲ್ಲಿ ಸಂಚರಿಸುವಾಗ ಸುಂದರಿಯಾದರೂ ಜಾತಿಹೀನಳಾದ ಒಬ್ಬ ದಾಸೀ ಪುತ್ರಿಯನ್ನು ನೋಡಿ ಮೋಹಿಸಿದ. ಅವಳಲ್ಲಿ ವತ್ಸಪ್ರಿಯ, ಸ್ಥೂಲರಶ್ಮಿ, ಅಕ್ಷಣಿಯರೆಂಬ ಋಷಿಗಳನ್ನು ಮಕ್ಕಳನ್ನಾಗಿ ಪಡೆದು ಪಿತೃಋಣದಿಂದ ಮುಕ್ತನಾಗಿ ಸ್ವರ್ಗವನ್ನು ಪಡೆದ.

ಒಂದು ಸಲ ದುರ್ಭಿಕ್ಷವು ಭೂಮಿಯನ್ನು ಪೀಡಿಸಿತು. ಮಳೆಯಿಲ್ಲದೆ ರಣಗುಡುವ ಬಿಸಿಲಿಗೆ ಹಸಿರೆಲ್ಲವೂ ಸುಟ್ಟುಹೋಯಿತು. ಗೌತಮನು ತನ್ನ ತಪೋಬಲದಿಂದ ಆಶ್ರಮದ ಸುತ್ತಲೂ ಹರಿಸಿದ ಗಿಡಗಳನ್ನು ಹಬ್ಬಿಸಿ, ಕ್ಷಾಮದಿಂದ ತ್ರಸ್ತರಾಗಿದ್ದ ಋಷಿಗಳೆಲ್ಲರಿಗೂ ಆಶ್ರಯ ನೀಡಿದ. ಅವನಲ್ಲೆ ತಿಂದು ಸೊಕ್ಕಿದ ಋಷಿಗಳಿಗೆ ಅವನ ಮೇಲೆಯೇ ಅಸೂಯೆಯುಂಟಾಯಿತು. ಗೌತಮನೂ ಪತನ ಹೊಂದಬೇಕೆಂದು ಅವರು ಕೃತ್ರಿಮ ದನವೊಂದನ್ನು ಸೃಷ್ಟಿಸಿ ಆಶ್ರಮದ ಬಳಿ ಬಿಟ್ಟರು. ಅದು ಗಿಡಗಳನ್ನೆಲ್ಲ ತಿಂದು, ತುಳಿದು ನುಚ್ಚುನೂರು ಮಾಡಲಾರಂಭಿಸಿತು.

ಅದನ್ನು ನೋಡಿ ಗೌತಮನಿಗೆ ದುಃಖವಾಯಿತು. ದನವನ್ನು ಹೊಡೆದೋಡಿಸಲು ಮನವೊಲ್ಲದೆ ಅದರ ಮೇಲೆ ಕಮಂಡಲುದ ನೀರನ್ನು ಸಂಪ್ರೋಕ್ಷಿಸಿ "ಹೋಗು" ಎಂದನು. ಆಗ ದನವು ಕೆಳಗೆ ಬಿದ್ದು ವಿಲಿವಿಲಿ ಒದ್ದಾಡಿ ಪ್ರಾಣ ಬಿಟ್ಟಿತು ಇದನ್ನೇ

ನೋಡುತ್ತ ನಿಂತಿದ್ದ ಅಸೂಯಾಪರರಾದ ಋಷಿಗಳು, "ಎಲಾ ಪಾಪಿ-ಗೌತಮಾ, ಗೋಹತ್ಯೆ ಎಸಗಿದೆಯಲ್ಲ. ಇನ್ನು ನಿನ್ನಲ್ಲಿ ನಾವಿರಲಾರೆವು" ಎಂದು ಸಿಟ್ಟಿನಿಂದ ಹೊರಟುಬಿಟ್ಟರು.

ಗೌತಮ ಅವರನ್ನು ಸಮಾಧಾನಪಡಿಸಿ, ಶಿವನನ್ನು ಭಕ್ತಿಯಿಂದ ಸ್ಮರಿಸಿದ. ಶಿವನು ಪ್ರತ್ಯಕ್ಷನಾಗಿ ತನ್ನ ಜಡೆಯಿಂದ ಒಂದು ಹಿಡಿ ಕೂದಲನ್ನು ಕಿತ್ತು ಅವನಿಗೆ ಕೊಟ್ಟು ಸತ್ತಿರುವ ದನದ ಮೇಲೆ ಹಿಂಡಲು ಹೇಳಿದ. ಗೌತಮ ಹಾಗೆ ಮಾಡಿದಾಗ ದನವು ಬದುಕಿ ನದಿಯ ರೂಪ ಧರಿಸಿ, ಗೌತಮನ ಆಶ್ರಮವಿರುವ ಸಹ್ಯ ಪರ್ವತದಿಂದ ಕೆಳಗೆ ಹರಿಯಲಾರಂಭಿಸಿತು. ಈ ನದಿಗೆ ಗೌತಮೀ ಅಥವಾ ಗೋದಾವರಿ ನದಿಯೆಂದೂ ಹೆಸರಾಯಿತು. ಲೋಕದ ದುರ್ಭಿಕ್ಷ ಪರಿಹಾರವಾಯಿತು. ಭಗೀರಥನು ಗಂಗೆಯನ್ನು ಭೂಮಿಗೆ ತರುವ ಮೊದಲೇ ಹುಟ್ಟಿದುದರಿಂದ ಅದಕ್ಕೆ ವೃದ್ಧಗಂಗೆಯೆಂದೂ ಹೆಸರಿದೆ.

ಉದಂಕ ಮುನಿ ಗೌತಮನ ಶಿಷ್ಯನಾಗಿ ವಿದ್ಯಾಭ್ಯಾಸ ಪೂರೈಸಿದ. ಬಳಿಕ ಗುರುದಕ್ಷಿಣೆಯಾಗಿ ಏನು ತಂದುಕೊಡಬೇಕೆಂದು ಕೇಳಿದ. "ನನಗೇನೂ ಬೇಡ. ಅಹಲ್ಯೆಗೆ ಏನಾದರೂ ಬೇಕಾದರೆ ತಂದು ಕೊಡು" ಎಂದ ಗೌತಮ. ಅಹಲ್ಯೆಯನ್ನು ಕೇಳಿದಾಗ "ಸೌದಾಸ ರಾಜನ ಮಡದಿ ಮದಯಂತಿಯಲ್ಲಿ ಕರ್ಣಕುಂಡಲಗಳಿವೆ. ಅದನ್ನು ಕೇಳಿ ತಂದುಕೊಟ್ಟರೆ ನನಗೊಂದು ವ್ರತಾಚರಣೆಗೆ ಒಳ್ಳೆಯದಿತ್ತು" ಎಂದಳು.

ಉದಂಕನು ಅವಳಿಂದ ಕರ್ಣಕುಂಡಲಗಳನ್ನು ತರುವಾಗ ತಕ್ಷಕನು ಅವುಗಳನ್ನು ಅಪಹರಿಸಿದರೂ ಇಂದ್ರನ ದಯೆಯಿಂದ ಅದು ಅವನಿಗೆ ಮರಳಿ ಸಿಕ್ಕಿತು. ಅವನ ಗುರುಭಕ್ತಿಗೆ ಸಂಪ್ರೀತನಾಗಿ ಗೌತಮ ತನ್ನ ಮಗಳನ್ನು ಉದಂಕನಿಗೆ ಮದುವೆ ಮಾಡಿ ಕೊಟ್ಟು ಅಳಿಯನನ್ನಾಗಿ ಮಾಡಿಕೊಂಡ.

ಪಂಚ ಕನ್ಯೆಯರಲ್ಲಿ ಒಬ್ಬಳೆಂದು ಖ್ಯಾತಳಾದ ಅಹಲ್ಯೆಯಲ್ಲಿ ಗೌತಮನಿಗೆ ಶತಾನಂದನೆಂಬ ಮಗನು ಜನಿಸಿದ. ಜನಕರಾಜನಿಗೆ ಶತಾನಂದ ಪುರೋಹಿತ.

ಬ್ರಾಹ್ಮಣ ಎಷ್ಟು ಮಹಿಮಾವಂತನೆಂಬ ಬಗೆಗೆ ಅತ್ರಿ ಋಷಿಗೆ ಬೋಧಿಸಿದವ ಗೌತಮ. ತಪಸ್ಸಿಗಾಗಿ ಪೃಥ್ವಿಗೆ ಬಂದ ಪಾರ್ವತಿಗೆ ಅರುಣಾಚಲ ಕ್ಷೇತ್ರದ ಮಹಿಮೆಯನ್ನೂ ಆತನೇ ವರ್ಣಿಸುತ್ತಾನೆ.



## ಬಿಜಾಪುರದ ಸಚೇತನ ಗೋಳಗುಮ್ಮಟ
## ಡಾ|| ಫಿ. ಜಿ. ಹಳಕಟ್ಟಿ

—ಹೆಚ್. ವಿ. ವೀರಭದ್ರಯ್ಯ

"ದೇಶ-ಭಾಷೆ, ಸಾಹಿತ್ಯ ಸಂಸ್ಕೃತಿಗಳ ಸಂವರ್ಧನೆಗಾಗಿ ತನ್ನ ಶರೀರವನ್ನೇ ಸವೆಸಿದ ಪುಣ್ಯಪುರುಷರನ್ನೂ ಸ್ಮರಿಸುವುದು ಸತ್ಸಂಪ್ರದಾಯ". ಲಿಂಗೈಕ್ಯ ಫಕೀರಪ್ಪ ಗುರುಬಸಪ್ಪ ಹಳಕಟ್ಟಿಯವರು ಅಂಥ ಪುಣ್ಯಪುರುಷರ ಸಾಲಿನ ಒಂದು ಅನರ್ಘ್ಯ ರತ್ನಮಂಗಲ ಕಲಶ. ಅವರ ಜನನ 2-7-1880. ತಾಯಿ ದಾನಮ್ಮ; ತಂದೆ ಗುರುಬಸಪ್ಪ ಹಳಕಟ್ಟಿ. ಸುಸಂಸ್ಕೃತ ಕುಟುಂಬ. ಬೆಳೆದರು, ಪದವೀಧರರಾದರು 1902 ರಲ್ಲಿ. 1904 ರಲ್ಲಿ ಎಲ್‌ಎಲ್‌ಬಿ ಪ್ರಥಮ ವರ್ಗದಲ್ಲಿ ಉತ್ತೀರ್ಣತೆ. ಸತಿ ಭಾಗೀರಥಿದೇವಿ. ಅನುಕೂಲಕರ ದಾಂಪತ್ಯ. ಮಕ್ಕಳು ಚಂದ್ರಶೇಖರ, ಗುರುಪುತ್ರ. ಕೆಲವು ಕಾಲ ವಕೀಲ ವೃತ್ತಿ. ಅದರಿಂದ ಮುಕ್ತಿ. ಶರಣ ಸಾಹಿತ್ಯದ ಸಹವಾಸವು ಅವರನ್ನು ಶರಣರನ್ನಾಗಿಯೇ ಮಾಡಿತ್ತು" 'ಷಟ್‌ಸ್ಥಲ ತಿಲಕ', 'ಪ್ರಭುದೇವರ ವಚನ'ಗಳ ಪ್ರಥಮ ದರ್ಶನ. ಲೋಹ ಚುಂಬಕದಂತೆ ಆಕರ್ಷಣೆ ಅದರತ್ತ. ಬದುಕಿನ ಮಹತ್ವಪೂರ್ಣ ತಿರುವು. ಶರಣ ಸಾಹಿತ್ಯ ಜಗತ್ತಿನ ಪುಣ್ಯ. ಕನ್ನಡದ ಭಾಗ್ಯ. ಮಣ್ಣಾಗಿ ಹೋಗುತ್ತಿದ್ದ ಅಪಾರ ವಚನಸಾಹಿತ್ಯದ ಪ್ರಕಟಣೆ. "ಅವರದು "ಎತ್ತರದ ನಿಲುವು, ತೆಳುವಾದ ದೇಹ, ಮೃದು ನಡೆ, ಮೃದು ನುಡಿ, ಹಣೆಯ ಮೇಲೆ ಈಷದ್ ವಿಭೂತಿ, ತಲೆಯ ಮೇಲೆ ಶುಭ್ರವಾದ ರುಮಾಲು, ಒಂದು ಪಂಜೆ ಕೋಟು ಇಷ್ಟು ಧಾರಣ ಮಾಡಿ ನಡೆದು ಬಂದರೆ ಹನ್ನೆರಡನೆಯ ಶತಮಾನದ ಶರಣರೇ ಈ ಯುಗಕ್ಕೆ ನಡೆದುಬಂದವರೆಂಬಂತೆ ಭಾಸವಾಗುತ್ತಿತ್ತು". ರತಿ-ವಿರತಿಯಿಂದ, ಬೇಕು-ಬೇಡಗಳಿಂದ ದೂರ ನಿಂತರು.

ಶಿಕ್ಷಣ, ಸಾಹಿತ್ಯ, ಸಹಕಾರ ಡಾ|| ಹಳಕಟ್ಟಿಯವರು ಸೇವೆ ಸಲ್ಲಿಸಿದ ಕ್ಷೇತ್ರಗಳು. ನವಕರ್ನಾಟಕ, ಶಿವಾನುಭವ ಪತ್ರಿಕೆಗಳನ್ನೂ ನಡೆಸಿದರು. ಕನ್ನಡ ಕರ್ನಾಟಕ ಅವರ ಉಸಿರು. ಕರ್ನಾಟಕತ್ವದ ಬೀಜ ಬಿತ್ತಿದ ಕರ್ತೃ, ಅಗ್ರಗಣ್ಯ. ಶ್ರೀ ಸಿದ್ಧೇಶ್ವರ ಬ್ಯಾಂಕ್, ಶ್ರೀ ಸಿದ್ಧೇಶ್ವರ ದೇವಾಲಯ, ಶ್ರೀ ಸಿದ್ಧೇಶ್ವರ ಹೈಸ್ಕೂಲ್, ವಿಜಯ ಕಾಲೇಜ್, ಹಿತಚಿಂತಕ ಪ್ರೆಸ್-ಇವೆಲ್ಲ ಅವರ ಸಾಧನೆಯ ಸಾಕ್ಷಿ ಕಲಶಗಳು.

'ಹಳಕಟ್ಟಿಯವರು ಚಿರಂಜೀವಿಗಳಾದುದು ಅವರ ಶರಣಸಾಹಿತ್ಯ ಸೇವೆಯಿಂದ.

ವಚನಸಾಹಿತ್ಯ ವಿಶ್ವಸಾಹಿತ್ಯದಲ್ಲಿಯೇ ಮನ್ನಣೆ ಪಡೆದು; ಕನ್ನಡ ನುಡಿಗೆ ಕೀರ್ತಿಯನ್ನು ತರಬಲ್ಲುದೆಂದು ತೋರಿಸಿಕೊಟ್ಟವರು ಶ್ರೀಮಾನ್ ಹಳಕಟ್ಟಿಯವರು." ಅವರ ದುಡಿಮೆಯ ಫಲ ಮುನ್ನೂರು ಜನ ಶಿವಶರಣರ ಹೆಸರುಗಳು ಬೆಳಕುಕಂಡದ್ದು. "ಅವರು ಶರಣ ಸಾಹಿತ್ಯ ಕ್ಷೇತ್ರದಲ್ಲಿ ಕಾರ್ಯ ಮಾಡದೆ ಹೋಗಿದ್ದರೆ ಕನ್ನಡ ಸಾಹಿತ್ಯದ ಅಪಾರ ನಿಧಿಯೆನಿಸಿದ ವೀರಶೈವ ಸಾಹಿತ್ಯದ ಬಹು ಭಾಗ ಹುಳುಗಳಿಗೆ ಆಹಾರವಾಗಿ ಹೋಗಬಹುದಿತ್ತೆಂದು ತೋರುತ್ತದೆ." "ವಚನದಿಂದ ಹಳಕಟ್ಟಿಯವರು ತಮ್ಮ ಜೀವನವನ್ನು ರೂಪಿಸಿ ಬೆಳೆಸಿಕೊಂಡರೆ ವಚನಸಾಹಿತ್ಯವು ಅವರಿಂದ ಬೆಳಕು ಕಂಡಿತು." ಜಂಗಮ ವಿಶ್ವವಿದ್ಯಾಲಯವಾದರು ಅವರು. ಕನ್ನಡ ಸಾಹಿತ್ಯ ಸಮ್ಮೇಳನ, ವೀರಶೈವ ಮಹಾಸಭೆಗಳ ಅಧ್ಯಕ್ಷರಾಗಿ ಅವುಗಳ ಕೀರ್ತಿ ಹೆಚ್ಚಿಸಿದರು. ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಿ.ಲಿಟ್ ಪದವಿ ನೀಡಿ ಎತ್ತರವಾಯಿತು.

"ಜೀವನವು ನಿರಂತರ ಅಖಂಡವಾದುದು." ಹುಟ್ಟಿದ್ದು ಧಾರವಾಡದಲ್ಲಿ, ಬೆಳೆದದ್ದು - ಬಾಳಿದ್ದು - ನೆಲೆ ನಿಂತದ್ದು ಬಿಜಾಪುರಲ್ಲಿ. ಶಿಕ್ಷಕರಾಗಿ, ನಗರ ಪಾಲಿಕೆಯ ಸದಸ್ಯರಾಗಿ, ಮುಂಬಯಿ ವಿಧಾನ ಪರಿಷತ್ತಿನ ಸದಸ್ಯರಾಗಿ, ಸೆನೆಟ್ ಸದಸ್ಯರಾಗಿ, ಪಬ್ಲಿಕ್ ಪ್ರಾಸಿಕ್ಯೂಟರ್‌ನಾಗಿ ದುಡಿದರು. ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಸುಮಾರು ಎಪ್ಪತ್ತು ಕೃತಿಗಳನ್ನು ಪ್ರಕಟಿಸಿದರು. ವಚನಸಾಹಿತ್ಯ ಹಳಕಟ್ಟಿಯವರ ಜೀವನದ ಉಸಿರಾಗಿತ್ತು. ಏಕೆದಂರೆ "ಈ ಸಾಹಿತ್ಯದಲ್ಲಿ ಧರ್ಮಾಂಧತೆಯಿಲ್ಲ. ಅದು ವಿಶ್ವಧರ್ಮವಾಗಿದೆ. ಶರಣರು ಜಾತಿಯನ್ನು ಮನ್ನಿಸುವುದಿಲ್ಲ. ಪ್ರತಿಯೊಬ್ಬನೂ ಕಠಿಣ ಪರಿಶ್ರಮ ಮಾಡಬೇಕು. ಭಿಕ್ಷೆ ಬೇಡಬಾರದು -ಎಂದು ಅವರು (ಶರಣರು) ಉಪದೇಶ ಮಾಡಿದ್ದಾರೆ. ಪುರುಷರಿಗೆ ಕೊಟ್ಟ ಸ್ಥಾನವನ್ನೇ ಸ್ತ್ರೀಯರಿಗೆ ಕೊಟ್ಟಿದ್ದಾರೆ. ಅವರ ಜೀವನ ಸಿದ್ಧಾಂತವು ಅಮೋಘವಾಗಿದೆ. ಅಮರವಾಗಿದೆ.... ರಚನಾತ್ಮಕ ಕಾರ್ಯಗಳಿಂದ ಆರೋಗ್ಯಮಯ ಹಾಗೂ ಉಪಯುಕ್ತ ಜೀವನವನ್ನು ಬದುಕಲು ತೋರಿಸುವುದೇ ನನ್ನ ಉದ್ಧೇಶವಾಗಿದೆ. ಅದು ಜೀವನವನ್ನು ಹಿಗ್ಗಿಸುತ್ತದೆ. ಮತ್ತು ಮನುಷ್ಯನನ್ನು ಉತ್ಸಾಹಶಾಲಿ ಹಾಗೂ ಸಮರ್ಥನನ್ನಾಗಿ ಮಾಡುತ್ತದೆ. ಜೀವನದಲ್ಲಿ ಯಾವಾಗಲೂ ತೊಂದರೆಗಳು ಬಂದೇ ಬರುತ್ತವೆ. ಅವುಗಳನ್ನು ನಿವಾರಿಸಲು ಮಾಡುವ ಪ್ರಯತ್ನ ಯಾವಾಗಲೂ ಉತ್ಸಾಹವನ್ನು ತಂದುಕೊಡುತ್ತದೆ. ಈ ರೀತಿಯಾಗಿ ಮನುಷ್ಯನು ಕ್ರಮವಾಗಿ ಮುಂದುವರಿಯಬೇಕು. ನಾವು ಮುಂದುವರಿದಂತೆ ಹೊಸ ಸನ್ನಿವೇಶ ಹಾಗೂ ಸಮಸ್ಯೆಗಳು ಬರುತ್ತವೆ. ಅವುಗಳನ್ನು ನಾವು ಎದುರಿಸಬೇಕಾಗುತ್ತದೆ. ಆದರೆ ಮನುಷ್ಯನು ನಿರಾಶನಾಗಬಾರದು. ಏಕೆಂದರೆ ನಾವು ಕೈಗೊಂಡ ಕೆಲಸಗಳಲ್ಲಿ ಯಾವಾಗಲೂ ಆಶೆಯ ಕಿರಣಗಳು ಇದ್ದೇ ಇರುತ್ತವೆ. ಪ್ರಯತ್ನವನ್ನು ಮಾಡಿದರೆ ಉನ್ನತ ಮಟ್ಟ



ವನ್ನು ಮುಟ್ಟಲು ಸಾಧ್ಯ" -ಎಂಬ ಸಂದೇಶ ಅವರದು. ಯುವ ಜನಾಂಗ ಈ ಮಾತುಗಳನ್ನು ಚಿಂತನ-ಮಂಥನ ಮಾಡುವಲ್ಲಿ ಭವಿಷ್ಯವಿದೆ.

ಕರ್ನಾಟಕದ ಮ್ಯಾಕ್ಸಮುಲ್ಲರ, ವಚನ ಪಿತಾಮಹ, ನೂತನ ಪುರಾತನ, ಇಳೆಗಿಳಿದ ಶರಣ, ಘನಮನಸಂಪನ್ನ ಎಂದೆಲ್ಲ ಹೆಸರಾದ ಡಾ|| ಪಿ. ಜಿ. ಹಳಕಟ್ಟಿಯವರು ಪಡೆದ ಪ್ರಶಸ್ತಿಗಳದೆಷ್ಟು, ಸನ್ಮಾನಗಳಿಗೆ ಲೆಕ್ಕವಿಟ್ಟವರಾರು ? ಸುಮಾರು ಎಂಬತ್ತೈದು ವರ್ಷಗಳ ಕಾಲ ತುಂಬು ಬಾಳು ಹಳಕಟ್ಟಿಯವರದು; ಸಾರ್ಥಕ ಬದುಕು, ಸಾಫಲ್ಯ ಜೀವನ. ಆ ಸಚೇತನ ಗೋಳಗುಮ್ಮಟ ಬಯಲಾಯಿತು 29-6-1964 ರಂದು. ಬೆಳಗಿನೊಳಗಣ ಬೆಳಗಾಯಿತು.

[ಆಧಾರಿತ :- ವಚನ ಪಿತಾಮಹ]

# ಭಾರತ ಕಣ್ಮಣಿ ಜವಾಹರರು

—ಎನ್. ಎಸ್. ಗದಗಕರ

ಭಾರತದ ರಾಜಕೀಯದ ರಾಗದಾಗಸದಿ
ಜಾಜ್ವಲ್ಯಮಾನ ತಾರೆಯು ಆಗಿ ಪರಿಣಮಿಸಿ,
ಭಾರತದ ದಿವ್ಯ ದರ್ಶನವನ್ನು ವಿಶ್ವಕ್ಕೆ
ಒದವಿಸುವ ನಾಡ ಕಣ್ಮಣಿಯಾಗಿ ಮೆರೆದಿರ್ವಿ ।

—

ನಿಮ್ಮ ವಾಗ್ವೈಖರಿಯು, ಸತ್ವಯುತ ಪದಸರಣಿ,
ಘನವಾದ ವ್ಯಕ್ತಿತ್ವ ಭಾರತಕೆ ಹೆಮ್ಮೆ;
ಸಿರಿವಂತಿಕೆಯ ಬಿಸುಟು ಭಾರತಕೆ ಜೀವಕಳೆ
ತುಂಬಿಸಲು ನೀವು ಗೈದಿಹ ತ್ಯಾಗ ಅನುಪಮವು

ಮನೆಮಾರು ಐಹಿಕದ ಸುಖವ, ಗಾಳಿಗೆ ತೂರಿ
ನಿಮ್ಮ ತಾಕಿಕ ಜಾಣ್ಮೆ ಲೋಕದಲಿ ಹರಡಿದಿರಿ;
ಒಕ್ಕಟ್ಟು ಸಂಸ್ಕೃತಿಯು ದೇಶದೇಳ್ಗೆಗೆ ಮೂಲ
ಎಂದರಿತು ನಾಡಿನಲಿ ಆ ಗಂಗೆ ಹರಿಸಿದಿರಿ !
ಶ್ರದ್ಧೆ, ಶ್ರಮ ನಾಡ ಜಾಗೃತೆಗೆ ಬೇಕೆಂದು ನೀವು
ಸಾರಿದ ಮಹಾ ಮಂತ್ರವನು ಎಂತು ಮರೆತೇವು ?



# ಜಗದ್ದರ್ಶನಮಾಲೆ–

## ನಾಥಪಂಥ

—ಎಂ. ಜಿ. ನಂಜುಂಡಾರಾಧ್ಯ

ಭಾರತದ ಪ್ರಸಿದ್ಧ ಮತ ಪಂಥಗಳಲ್ಲಿ ನಾಥಸಂಥವೂ ಒಂದು. ಅದರ ಅಸ್ತಿತ್ವವು ಪುರಾತನವಾದುದೆಂದು ತೋರುತ್ತದೆ. ಕ್ರಿ.ಶ ೭ನೆಯ ಶತಮಾನದಿಂದ ಈ ಪರಂಪರೆಯ ಕೆಲವರು ವ್ಯಕ್ತಿಗಳು ಇತಿಹಾಸದಲ್ಲಿ ಕಾಣಿಸಿಕೊಳ್ಳುತ್ತಾರೆ. ಈ ಪರಂಪರೆಯ ಮೂಲ ಪುರುಷರು ನವನಾಥಸಿದ್ಧರೆಂದು ಪ್ರಸಿದ್ಧರಾಗಿದ್ದಾರೆ. ಈ ಪಂಥವು ಕಾಪಾಲಿಕ ಭೈರವ ಸಂಪ್ರದಾಯಕ್ಕೆ ಸೇರಿದ್ದು. ಸುಧಾಕರ ಚಂದ್ರಿಕಾ, ನೇಪಾಲ ಕ್ಯಾಟ್‌ಲಾಗ್ ಮತ್ತು ನವನಾಥ ಕಥಾ ಮುಂತಾದ ಗ್ರಂಥಗಳಲ್ಲಿ ಈ ಪರಂಪರೆಯ ಹೆಸರುಗಳು ಭಿನ್ನಭಿನ್ನವಾಗಿ ದೊರೆಯುತ್ತವೆ. ಸ್ಕಾಂದಪುರಾಣ–ಕೇದಾರಖಂಡ (ಅ.೭೪. ಪು.೮೨)ದಲ್ಲಿ ೧. ಆದಿನಾಥ, ೨. ಅನಾದಿನಾಥ, ೩. ಕೂರ್ಮನಾಥ, ೪. ಭವನಾಥ, ೫. ಸತ್ಯನಾಥ, ೬. ಸಂತೋಷನಾಥ, ೭. ಮತ್ಸ್ಯೇಂದ್ರನಾಥ, ೮. ಗೋಪಿನಾಥ ಮತ್ತು ೯. ಗೋರಕ್ಷನಾಥ ಎಂಬುವರನ್ನು ನವನಾಥರೆಂದು ಹೆಸರಿಸಲಾಗಿದೆ.

ಪ್ರಾಣತೋಷಿಣೀ ಎಂಬ ಗ್ರಂಥದ ಪ್ರಕಾರ ನವನಾಥರ ಪರಂಪರೆ ಹೀಗಿದೆ: ೧. ಪರಮಾನಂದನಾಥ, ೨. ಪ್ರಕಾಶಾನಂದನಾಥ, ೩. ಕುಲೇಶ್ವರಾನಂದನಾಥ, ೪. ಕೋಲೇಶಾನಂದನಾಥ, ೫ ಭುಜಗಾನಂದನಾಥ, ೬. ಸಹಜಾನಂದನಾಥ, ೭. ಗಂಗತಾನಂದನಾಥ, ೮. ಲೋಕಾನಂದನಾಥ, ಮತ್ತು ೯. ವಿಮಲಾನಂದನಾಥ ಎಂದು ಹೇಳಲಾಗಿದೆ. ಈ ಹೆಸರುಗಳು ಹಿಂದೆ ಹೇಳಿದ ಆದಿನಾಥ ಮುಂತಾದವರ ಪರ್ಯಾಯನಾಮಗಳೊ ಅಥವಾ ಬೇರೆಯೊ ಎಂಬುದು ಗೊತ್ತಾಗುವುದಿಲ್ಲ.

ಇದರಂತೆ ಮಹಾರ್ಣವ ತಂತ್ರದಲ್ಲಿ ೧. ಗೋರಕ್ಷನಾಥ, ೨. ಜಾಲಂದರನಾಥ, ೩. ನಾಗಾರ್ಜುನನಾಥ, ೪. ಸಹಸ್ರಾರ್ಜುನನಾಥ, ೫. ದತ್ತಾತ್ರೇಯನಾಥ, ೬. ದೇವದತ್ತನಾಥ, ೭. ಜಡಭರತನಾಥ, ೮. ಆದಿನಾಥ ಮತ್ತು ೯. ಮತ್ಸ್ಯೇಂದ್ರನಾಥರನ್ನು ನವನಾಥರೆಂದು ಕರೆಯಲಾಗಿದೆ.

ಇವರಲ್ಲಿ ಮತ್ಸ್ಯೇಂದ್ರನು ಗೋರಕ್ಷನ ಗುರುವೆಂದು ಸ್ಕಾಂದಪುರಾಣ ಹೇಳಿದರೆ,

ಮಹಾರ್ಣವತಂತ್ರವು ಗೋರಕ್ಷನನ್ನು ನವನಾಥರ ಮೊದಲಿಗನೆಂದು ಹೆಸರಿಸಿ ಮತ್ಸ್ಯೇಂದ್ರನನ್ನು ಕಡೆಯವನನ್ನಾಗಿ ಚಿತ್ರಿಸಿದೆ.

ಗೋರಕ್ಷನಾಥನು ಭಾರತದ ಪ್ರಸಿದ್ಧ ಹಠಯೋಗಿಗಳಲ್ಲಿ ಒಬ್ಬ. ಈತ ಆರಂಭಿಸಿದ ಪಂಥಕ್ಕೆ 'ಕಾನ್ ಫಟ್' ಪಂಥವೆಂಬ ಪರ್ಯಾಯ ನಾಮವಿದೆ. ಈತ ತನ್ನ ಶಿಷ್ಯರನ್ನು ಗುರ್ತಿಸಲು ಕಿವಿಸೀಳುವ ಪದ್ಧತಿ ತಂದುದರಿಂದ ಇದಕ್ಕೆ 'ಕಾನ್ ಫಟ್' ಎಂಬ ಹೆಸರು ಬಂದಿತಂತೆ! ಇವರು ಸೀಳಿದ ಕಿವಿಗಳಲ್ಲಿ ದೊಡ್ಡ ಕುಂಡಲಗಳನ್ನು ಧರಿಸಿರುತ್ತಾರೆ.

ಗೋರಖ್ ಎಂಬುದು ಗೋರಕ್ಷ ಎಂಬ ಸಂಸ್ಕೃತಪದದ ತದ್ಭವ. ಈತ ಕ್ರಿ. ಶ. ಏಳನೆಯ ಶತಮಾನದವನೆಂದೂ ನೇಪಾಳ ರಾಜಮನೆತನಕ್ಕೆ ಸೇರಿದವನೆಂದೂ ಪ್ರತೀತಿಯಿದೆ. ಯೋಗಸಾಧನೆಯಿಂದ ವಜ್ರ ಶರೀರಿ ಎನಿಸಿಕೊಂಡಿದ್ದ ಗೋರಕ್ಷ ಕ್ರಿ ಶ. ೧೨ ನೆಯ ಶತಮಾನದ ರೇವಣಸಿದ್ಧ, ಅಲ್ಲಮಪ್ರಭು ಮತ್ತು ಸಿದ್ಧರಾಮರೊಡನೆ ವಾದಿಸಿದಂತೆ ವೀರಶೈವ ಗ್ರಂಥಗಳಲ್ಲಿ ಉಕ್ತವಾಗಿದೆ.

ಈತನ ಗ್ರಂಥಗಳು ಹಠಯೋಗ ಮತ್ತು ಗೋರಕ್ಷಶತಕ ಮುಂತಾದವು. ಈ ಸಿದ್ಧಾಂತ ಪ್ರತಿಪಾದಕವಾದ ಗ್ರಂಥಗಳಲ್ಲಿ ಅಮರೌಘಶಾಸನ, ಗೋರಕ್ಷ ಸಿದ್ಧಾಂತ ಸಂಗ್ರಹ, ಸಿದ್ಧಾಂತ ಪದ್ಧತಿ ಮತ್ತು ಯೋಗಬೀಜ ಮುಂತಾದವು ಪ್ರಸಿದ್ಧವಾಗಿವೆ. ಈ ಸಂಪ್ರದಾಯದ ಮಠಗಳು ಕರ್ನಾಟಕದಲ್ಲಿ ಮಂಗಳೂರಿನ ಕದಲೀಪೀಠ, ವಿಠ್ಠಲ ಯೋಗೀಮಠ, ಚುಂಚನಗಿರಿ ಪೀಠಗಳಲ್ಲಿ ಉಳಿದುಕೊಂಡಿವೆ.

**ನಾಥಪಂಥದ ಸ್ವರೂಪ :**

ನಾಥಪಂಥದ ಮುಖ್ಯ ಪ್ರಮೇಯ ಅತ್ಯಾಶ್ರಮಿಗಳ ವಿಷಯ. ಇದು ಆಶ್ರಮಾತೀತ ಸ್ಥಿತಿ. ಅವರ ಕಲ್ಪನೆಯಲ್ಲಿ ಅತ್ಯಾಶ್ರಮಿಯೇ ಅವಧೂತ. ಅವಧೂತನ ಸ್ವರೂಪವನ್ನು ಕುರಿತು ಸಿದ್ಧ ಸಿದ್ಧಾಂತ ಪದ್ಧತಿಯಲ್ಲಿ 'ಯೋಗಿಗಳ ವ್ಯವಹಾರವು ನಿಯತವಾದುದಲ್ಲ. ಒಂದೆಡೆ ಭೋಗಿಯಾಗಿಯೂ, ಮತ್ತೊಂದೆಡೆ ತ್ಯಾಗಿಯಾಗಿಯೂ ಮಗುದೊಂದೆಡೆ ನಗ್ನನಾಗಿಯೂ, ಇನ್ನೊಂದೆಡೆ ರಾಜನಂತೆಯೂ, ಆಚಾರವಂತನಂತೆಯೂ ಇರುವವನೇ ಅವಧೂತ' ಎಂದು ಹೇಳಿದೆ. ಅವಧೂತ ಎಂಬ ಪದದಲ್ಲಿನ ಅಕ್ಷರಗಳಿಗೆ ಇರುವ ನಿರುಕ್ತಿ ಹೀಗಿದೆ :—

ಅ-ಕಾರವು ಆಶಾಪಾಶವಿಮುಕ್ತನೂ ಸ್ವಭಾವ ನಿರ್ಮಲನೂ ಆದ ಅನಂತಾನಂದ ಬ್ರಹ್ಮವನ್ನು ತಿಳಿದವನನ್ನು ಸೂಚಿಸುತ್ತದೆ. ವ-ಕಾರವು ವಾಸನೆಗಳನ್ನು ಜಯಿಸಿ, ನಿರ್ದುಷ್ಟವಚನವುಳ್ಳವನಾಗಿ, ಕಾಲಾನುಗುಣವಾಗಿ, ಕಾರ್ಯವೆಸಗುವು



ದನ್ನು ಬೋಧಿಸುತ್ತದೆ. ಧೂ-ಕಾರವು ಶರೀರವು ಧೂಳಿಧೂಸರಿತವಾಗಿದ್ದರೂ ಚಿತ್ತವು ವಿಷಯಗಳಿಂದ ವಿಮುಖವಾಗಿ ಧ್ಯಾನಮಗ್ನವಾಗಿರಬೇಕು ಎಂಬು ಸೂಚಿಸುತ್ತದೆ. ಚಿಂತೆ, ಚೇಷ್ಟೆ, ಅಹಂಕಾರಗಳನ್ನು ದೂರ ಮಾಡಿ ತತ್ತ್ವ ಚಿಂತನೆಯ ಪಾರವನ್ನು ಹೊಂದಿರುವುದು ತ-ಕಾರದ ಲಕ್ಷಣ. ಇದನ್ನೇ ಅವಧೂತ ಗೀತೆಯಲ್ಲಿ ಹೀಗೆ ಹೇಳಿದೆ—

ಅನಂತಾನಂದ ಬ್ರಹ್ಮಜ್ಞ ಮಕಾರಂ ತಸ್ಯ ಲಕ್ಷಣಂ
ವಾಸನಾ ವರ್ಜಿತಾ ಯೇನ ವಕ್ತವ್ಯಂಚ ನಿರಾಮಯಂ।
ವರ್ತಮಾನೇಷು ವರ್ತೇತ ವ ಕಾರಂ ತಸ್ಯ ಲಕ್ಷಣಂ॥
ಧೂಲಿ ಧೂಸರ ಗಾತ್ರಾಣಿ ಧೂತಚಿತ್ತಂ ನಿರಾಮಯಂ।
ಧ್ಯಾನ(?) ಧಾರಣ ನಿರ್ಮುಕ್ತಂ ಧೂಕಾರಂ ತಸ್ಯಲಕ್ಷಣಂ॥
ತತ್ತ್ವ ಚಿಂತಾಯೇನ ಧೂತಾ ಚಿಂತಾಚೇಷ್ಟಾ ವಿವರ್ಜಿತಾ।
ತಮಹಂಕಾರ ನಿರ್ಮುಕ್ತಂ ತಕಾರಂ ತಸ್ಯಲಕ್ಷಣಂ॥

**ಅವಧೂತನ ಸ್ಥಿತಿ ಎಂತಹುದು:**

ಬ್ರಹ್ಮನಿಂದ ಮೊದಲ್ಗೊಂಡು ಸ್ಥಾವರ ಪರ್ಯಂತವಾದ ಸಮಸ್ತ ಜಗತ್ತು ತನ್ನಲ್ಲಿ ಭೇದಾಭೇದವಿಲಕ್ಷಣರೂಪದಿಂದ ಅಡಗಿದೆ. ಅದು ತನಗಿಂತ ಪ್ರತ್ಯೇಕವಾಗಿಯೂ ಇರುವುದಿಲ್ಲ. ಆದ್ದರಿಂದ ಅಭೇದ ರೂಪದಿಂದಲೂ ಇರುವುದಿಲ್ಲ. ಆದ್ದರಿಂದ ಅದು ಭೇದರೂಪವೂ ಅಲ್ಲ, ಅಭೇದರೂಪವೂ ಅಲ್ಲ. ಭೇದಾಭೇದಗಳು ಪರಸ್ಪರ ವಿರುದ್ಧವಾದ್ದರಿಂದ ಎರಡೂ ಒಬ್ಬನಿಗೆ ಇರಲು ಸಾಧ್ಯವಿಲ್ಲ. ಅದಕ್ಕಾಗಿ ಈ ಸ್ಥಿತಿಯನ್ನು ಉಭಯ ವಿಲಕ್ಷಣ ಎಂದು ಹೇಳಲಾಗಿದೆ. ಆದ್ದರಿಂದ ಅವಧೂತನು ಪಂಚಮಾಶ್ರಮಿ ಎನಿಸಿದ್ದಾನೆ. ಆಶಾಪಾಶ ವಿಮುಕ್ತನಾಗಿ ನಿರ್ಮಲನಾಗಿ ಆನಂದಸ್ವರೂಪ ಬ್ರಹ್ಮವನ್ನು ತಿಳಿದವನೇ ಅವಧೂತನು.

'ಆದಿ ಮಧ್ಯಾಂತ ಮುಕ್ತೋಽಹಂ ನ ಬದ್ಧೋಽಹಂ ಕದಾಚನ।
ಸ್ವಭಾವನಿರ್ಮಲಃ ಶುದ್ಧಃ ಇತಿ ಮೇ ನಿಶ್ಚಲಾಮತಿಃ॥
ನ ಬದ್ಧೋ ನೈವ ಮುಕ್ತೋಽಹಂ ನ ಚಾಹಂ ಬ್ರಾಹ್ಮಣಃ ಪೃಥಕ್।
ನ ಕರ್ತಾ ನೈವ ಭೋಕ್ತಾಹಂ ವ್ಯಾಪ್ಯ ವ್ಯಾಪಕ ವರ್ಜಿತಃ॥
ನ ಜಾತೋಽಹಂ ಮೃತೋವಾಪಿ ನ ಕರ್ಮ ಶುಭಾಶುಭಮ್।
ಶುದ್ಧೋಽಹಂ ನಿರ್ಗುಣಂ ಬ್ರಹ್ಮ ಬಂಧಮುಕ್ತಿ ಕಥಂ ಮಮ॥
ಭೇದಾಭೇದವಿನಿರ್ಮುಕ್ತಂ ವರ್ತತೇ ಕೇವಲಂ ಶಿವಃ॥

(—ಗೋರಕ್ಷಸಿದ್ಧಾಂತ ಸಂಗ್ರಹವು ೬೧)

ಈ ಪಂಥದ ಗ್ರಂಥಗಳಲ್ಲಿ 'ನಾಥ' ಶಬ್ದನಿರ್ವಚನವೂ ಉಕ್ತವಾಗಿದೆ.

ನಾ=ಅನಾದಿಯಿಂದ, ಥ=ಇರುವುದು. ತ್ರಿಲೋಕಕಾರಣನಾಗಿ ಅನಾದಿ ರೂಪದಿಂದಿರುವಗೋರಕ್ಷನಾಥನೇ ನಾಥಪದವಾಚ್ಯನೆಂದು ಅಪರ ಕಲ್ಪನೆ.

> ಸಾಕಾರೋಽನಾದಿ ರೂಪಂ ಸ್ಯಾತ್ ಥಕಾರಃ ಸ್ಥಾಪ್ಯತೇ ಸದಾ ।
> ಭುವನತ್ರಯಮೇವೈಕಃ ಶ್ರೀ ಗೋರಕ್ಷನಮೋಽಸ್ತು ತೇ ॥
>
> (—ರಾಜಗುಹ್ಯ)

ಈ ನಾಥಪಂಥೀಯರು ಆನಂದರೂಪ ಮೋಕ್ಷ ಕೊಡುವುದರಲ್ಲಿ ಉದಾರಿಗಳು, ಬ್ರಹ್ಮಾನುಭವ ಪಡೆದವರು; ಅಜ್ಞಾನರಹಿತರು; ಆದ್ದರಿಂದಲೇ ಅವರನ್ನು ಶ್ರೀನಾಥ, ಶ್ರೀಗುರು ಎಂದು ಕರೆಯಲಾಗಿದೆ. ಇಂಥವರ ದೃಷ್ಟಿಯಲ್ಲಿ ವೇದಶಾಸ್ತ್ರ ಪುರಾಣಗಳು ಗಣಿಕೆಯರಂತೆ ಪ್ರಮಾಣಗಳಲ್ಲ. ಶಾಂಕರೀ ಮುದ್ರೆಯು ಕುಲವಧುವಿನಂತೆ ಪ್ರಮಾಣಭೂತವಾದದ್ದು.

ಸ್ವಕರ್ತವ್ಯ ನಿಷೇಧವೇ ಅವಧೂತ ಸಿದ್ಧಾಂತ. ಸರ್ವಾತೀತವಾದ ಬ್ರಹ್ಮ ಸ್ವರೂಪವನ್ನು 'ನೇತಿನೇತ್ಯಾತ್ಮಾ' ಎಂಬ ನಿಷೇಧರೂಪದಿಂದ ನಿರೂಪಿಸುವಂತೆ ಈ ಅವಧೂತಾವಸ್ಥೆಯನ್ನು ನಿಷೇಧಾತ್ಮಕವಾಗಿಯೇ ನಿರೂಪಿಸಲಾಗಿದೆ. ಆದ್ದರಿಂದಲೇ ಅನ್ಯಧರ್ಮಗಳೆಲ್ಲವೂ ಅವಧೂತರಿಗೆ ನಿಷಿದ್ಧ. ಅವಧೂತಯೋಗಿಗಳು ಸಾಧನಾವಸ್ಥೆಯಲ್ಲಿ ಸಂನ್ಯಾಸಾಶ್ರಮದಲ್ಲಿ ಹೇಳಿರುವ ಯಮ-ನಿಯಮಾದಿ ಕರ್ತವ್ಯಗಳನ್ನು ಆಚರಿಸಬೇಕೆಂಬ ವಿಧಿಯಿದೆ. ಸಿದ್ಧಿಯನ್ನು ಪಡೆಯುವವನು ಸಾಧನಗಳನ್ನು ತ್ಯಾಗ ಮಾಡಬಾರದು ಎಂಬ ವಿಶೇಷ ನಿಯಮವು ಯೋಗಿಗಳ ಮತದಲ್ಲಿಯೂ ಇದೆ. ಏಣಿಯ ಸಹಾಯದಿಂದ ಉಪ್ಪರಿಗೆಗೆ ಏರಿದವನು ಏಣಿಯನ್ನು ಕಡೆಗಣಿಸಬಾರದೆಂಬುದು ಇದರ ರಹಸ್ಯ. ಬಾಯಲ್ಲಿ ಮಾತ್ರ 'ಅಹಂಬ್ರಹ್ಮಾಸ್ಮಿ' ಎಂದದ್ದರಿಂದ ಅವನು ಬ್ರಹ್ಮ ಭಾವ ಪಡೆಯಲಾರ. ಬ್ರಹ್ಮಾನುಭವ ಅಳವಡುವುದೇ 'ಸಿದ್ಧಿ' ಎನಿಸುವುದು. ಅವರಿಗೇ ಸಿದ್ಧರೆಂಬ ಹೆಸರು ಅನ್ವಯವಾದೀತು ! ವ್ಯಾವಹಾರಿಕ ಸ್ಥಿತಿಯಲ್ಲಿ ಎಲ್ಲರೂ ಶ್ರುತಿ ಸ್ಮೃತಿ ಪ್ರತಿಪಾದಿತವಾದ ಎಲ್ಲ ಧರ್ಮಗಳನ್ನು ಆಚರಿಸಬೇಕು. ಸಿದ್ಧಾವಸ್ಥೆಗೇರಿದವನ ದೃಷ್ಟಿಯಲ್ಲಿ ಅವು ಗೌಣ ಎಂದು ತಾತ್ಪರ್ಯ.

ಎಲ್ಲ ಮತಗಳಲ್ಲಿ ಯೋಗಮತವೇ ಶ್ರೇಷ್ಠ. ಎಲ್ಲ ಮತಗಳು ಯೋಗಕ್ಕೆ ಅಂಗವಾಗಿವೆಯೆಂಬುದು ಇವರ ಹೇಳಿಕೆ. ಸನಾತನ ಧರ್ಮಕ್ಕೆ ಪ್ರತ್ಯೇಕ ಫಲವಿದೆ. ಅದನ್ನು ಯೋಗಿಗಳು ಸಾಧಿಸಿ ಅನುಭವಿಸುತ್ತಿರುವವರು ಎಂಬುದು ಈ ಪಂಥದ ಅಭಿಪ್ರಾಯ. ಈ ಪಂಥದಲ್ಲಿ ನಾಥನು ಅಖಂಡ ಸ್ವರೂಪ. ಆ ನಾಥನಲ್ಲಿ ಧ್ವನಿಯಿದೆ. ಅದು ಸ್ಫೋಟರೂಪ ಶಬ್ದಬ್ರಹ್ಮ. ನಾದವು ಸಂಸಾರಕ್ಕೆ ಪ್ರತ್ಯಕ್ಷಸಿದ್ಧವಾದ ಉಪಾದಾನ ಕಾರಣವಾದ ಶಕ್ತಿಸಂಬಂಧವುಳ್ಳದ್ದು. ಬಿಂದುವು ಸಂಸಾರವನ್ನು ರಚಿಸುವ ಆದಿಪ್ರಕೃತಿ ಅಥವಾ ಶಕ್ತಿ.



## ಪ್ರಣವಸ್ವರೂಪ ನಿರೂಪಣ :

ಓಂಕಾರದಲ್ಲಿರುವ ಅ-ಉ-ಮ ಗಳು ತ್ರಿಮೂರ್ತ್ಯಾತ್ಮಕವಾದವು. ಅ=ವಿಷ್ಣು, ಉ=ರುದ್ರ, ಮ=ಬ್ರಹ್ಮ. ಓಂಕಾರವು ಮಹಾಸಿದ್ಧರಿಗೆ ಧ್ಯೇಯ. ಓಂಕಾರದಲ್ಲಿನ ಉ=ರುದ್ರ ಮತ್ತು ಅರ್ಧಮಾತ್ರೆ ಎನಿಸಿರುವ ಮ್=ಶಕ್ತಿ. ಬಿಂದುನಾದ ರೂಪ. ಇದು ದ್ವೈತಾದ್ವೈತ, ಸಾಕಾರ ನಿರಾಕಾರಗಳಿಗೆ ಅತೀತವಾದದ್ದು. ಅದ್ವೈತದ ಮೇಲಿನ ಸ್ಥಿತಿ ಇದು.

ಮಹಾಸಿದ್ಧರು ನಾಥ, ಶಕ್ತಿ, ರುದ್ರರನ್ನು ಧ್ಯಾನಿಸುತ್ತಾರೆ. ಧ್ವನಿರೂಪವೂ ನಿರಾಕಾರವೂ ಆಗಿರುವ ಆದಿನಾಥನೇ ಸೃಷ್ಟಿಪ್ರಳಯಗಳಲ್ಲಿ ನಿರ್ವಿಕಾರನಾಗಿರುವ ರುದ್ರ. ಆದ್ದರಿಂದ ಬ್ರಹ್ಮವಿಷ್ಣುಗಳ ಧ್ಯಾನಕ್ಕಿಂತ ನಾಥ, ಶಿವ, ಶಕ್ತಿಗಳ ಧ್ಯಾನವೇ ಶ್ರೇಷ್ಠ. ಈ ಮೂರರಲ್ಲಿಯೂ ಸಹ ನಾಥಧ್ಯಾನವು ಅತಿಶ್ರೇಷ್ಠ.

ನಾಥಧ್ಯಾನಕ್ಕೆ ಏರುವುದು ಅಷ್ಟು ಸುಲಭವಲ್ಲ. ಅದು ಸಂಪೂರ್ಣ ಯೋಗಶಾಸ್ತ್ರವನ್ನು ಅವಲಂಬಿಸಿದೆ. ಇಲ್ಲಿ ಮೊದಲು ಬ್ರಹ್ಮಗ್ರಂಥಿ (ಸ್ವಾಧಿಷ್ಠಾನ ಚಕ್ರ) ಯನ್ನು ಭೇದಿಸಬೇಕು. ಅನಂತರ ವಿಷ್ಣುಗ್ರಂಥಿ (ಮಣಿಪೂರಕ ಚಕ್ರ) ಭೇದನವಾಗಬೇಕು. ಮುಂದೆ ಹೃದಯ ಸಮೀಪದ (ಅನಾಹತ ಚಕ್ರ) ದ ಹತ್ತಿರವಿರುವ ಕಂಠದೇಶದಲ್ಲಿರುವ ವಿಶುದ್ಧಿ ಚಕ್ರದಲ್ಲಿ ಅವಿದ್ಯಾ ಜೀವಶಕ್ತಿರೂಪ ರುದ್ರಗ್ರಂಥಿ ಭೇದನವಾಗಬೇಕು. ಹೀಗೆ ಮಾಡಿ ಮೇಲೇರುವ ಪ್ರಾಣವಾಯುವಿನ ಮೂಲಕ ಆಜ್ಞಾಚಕ್ರವೆಂಬ ಬ್ರಹ್ಮದ್ವಾರದಲ್ಲಿ ಜ್ಞಾನ ಚಕ್ರದ ಬಾಗಿಲನ್ನು ತೆರೆದು ಜ್ಞಾನಜ್ಯೋತಿಯನ್ನು ಕಾಣಬೇಕು. ಯೋಗಶಾಸ್ತ್ರದಲ್ಲಿ–

> ಬ್ರಹ್ಮಗ್ರಂಥಿಂ ತತೋಭಿತ್ವಾ ವಿಷ್ಣುಗ್ರಂಥಿಂ ಭಿನತ್ತ್ಯಸೌ ।
> ರುದ್ರಗ್ರಂಥಿಂ ತತೋಭಿತ್ವಾ ಛಿತ್ವಾಮೋಹಮಯೀಂಲತಾಂ ।
> ಉದ್ಘಾಟಯತ್ಯಯಂ ವಾಯುಃ ಬ್ರಹ್ಮದ್ವಾರಂ ಸುಗೋಪಿತಂ ॥

ಎಂದು ಹೇಳಿದೆ.

ನಾಥಜೀಯ ಅಂಶವೇ ನಾದ. ಆ ನಾದದ ಅಂಶವಾಗಿ ಶರೀರದಲ್ಲಿ ಪ್ರಾಣವಿದೆ. ಪ್ರಾಣದ ಮೇಲೆ ನಾಥಜಿ ಶಾಸನ ಮಾಡುತ್ತಾನೆ. ಈ ದೃಷ್ಟಿಯಿಂದ ಪ್ರಾಣವು ಶಿಷ್ಯ. ನಾಥಜಿ ಗುರು, ಶಕ್ತಿಯ ಅಂಶವು ಬಿಂದು. ಬಿಂದುವಿನ ಅಂಶ ಶರೀರ. ಇದರಿಂದ ಈ ಶರೀರವು ಪುತ್ರಸ್ಥಾನದಲ್ಲಿದೆ. ಶರೀರಕ್ಕೆ ಕಾರಣರಾದ ತಂದೆ ತಾಯಿಯರಿಗಿಂತ ಪರಮಾರ್ಥದಲ್ಲಿ ಗುರುವೇ ಮುಖ್ಯ. ಮಗನಿಗಿಂತ ಶಿಷ್ಯನಿಗೇ ಪ್ರಾಧಾನ್ಯ.

(ಮುಂದುವರಿಯುವುದು)

ಆಧ್ಯಾತ್ಮದ ಅಡಿಪಾಯದ ಮೇಲೆ ಭವ್ಯ, ಸಮೃದ್ಧ ರಾಷ್ಟ್ರ ಎದ್ದುನಿಲ್ಲಬೇಕು. ಆ ಪ್ರತಿಜ್ಞೆ ಇಂದು ಪ್ರತಿಯೊಬ್ಬ ಭಾರತೀಯ ಕೈಕೊಳ್ಳಬೇಕು.

37 ವರ್ಷಗಳು ನಡೆದು ಬಂದ ದಾರಿಯನ್ನು ಸಿಂಹಾವಲೋಕನ ಮಾಡಿದರೆ ಗೊತ್ತಾಗುತ್ತದೆ ನಮ್ಮ ಸಾಧನೆ, ಸಿದ್ಧಿಯ ನಿಚ್ಚಳ ಚಿತ್ರ.

ಸ್ವಾತಂತ್ರ್ಯ ತಂದುಕೊಟ್ಟ ಹಿರಿಯ ಮಹಾಪುರುಷರಿಗೆ ನಮ್ಮ ನಮನಗಳನ್ನ ರ್ಪಿಸೋಣ. ಅವರು ಕಟ್ಟಲಾಶಿಸಿದ ರಾಷ್ಟ್ರ ಕಟ್ಟಿ ಜಗತ್ತಿನಲ್ಲಿ ತಲೆಯೆತ್ತಿ ಬಾಳೋಣ, ಶೀಲ ಸಂಪತ್ತಿನ ಸತ್ಪ್ರಜೆಗಳಾಗಿ ಘಮಘಮಿಸೋಣ. ಅದಕ್ಕಾಗಿ ಆಚರಿಸೋಣ ಸ್ವಾತಂತ್ರ್ಯ ದಿನಾಚರಣೆಯನ್ನು. ಆಗಸ್ಟ್ 15 ಭಾರತೀಯನ ಬದುಕಿನಲ್ಲಿ "ನಾಡಿನ ಪೂರ್ವದ ಪುಣ್ಯ ದಿಗಂತದಲ್ಲಿ ನವ ಅರುಣೋದಯವಾದ" ದಿನ. ನೆನಪಿರಲಿ.

## ಇವರ ಬಾಳಿಗೊಂದು ಕಣ್ಣು ಕೊಡಿ

## ಅಂಧ ಮಕ್ಕಳೂ ನಮ್ಮ ಮಕ್ಕಳೇ.

## ಅವರ ಲಾಲನೆ–ಪಾಲನೆಯೂ ನಮ್ಮದೇ.

### ಅದಕ್ಕೊಂದು ಸುವರ್ಣಾವಕಾಶ

ಶ್ರೀ ಸಿದ್ಧಗಂಗಾ ಶ್ರೀ ಶ್ರೀಗಳವರು "ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಪಾಠಶಾಲೆ"ಯನ್ನು ನಡೆಸುತ್ತಿದ್ದಾರೆ.

ಪ್ರಾಥಮಿಕ ವಿದ್ಯಾಭ್ಯಾಸದ ಒಂದನೆಯ ತರಗತಿಯಿಂದ ಏಳನೆಯ ತರಗತಿಯವರೆಗೆ ಕಲಿಯಲವಕಾಶವಿದೆ. ಏಳರಿಂದ ಹನ್ನೆರಡು ವರ್ಷದೊಳಗಿನ ಅಂಧ ಮಕ್ಕಳನ್ನು ಸೇರಿಸಲು ಶ್ರೀ ಶ್ರೀಗಳವರನ್ನು ಸಂದರ್ಶಿಸಲು ವಿನಂತಿ.

ಉಚಿತ ಊಟ–ವಸತಿ ಸೌಲಭ್ಯವಿದೆ.

ದಾನ ನೀಡಿದ ಕೈ ಎಂದೂ ಬರಡಾಗುವುದಿಲ್ಲ; ಬಡವಾಗುವುದಿಲ್ಲ  
ದಾನ ನೀಡುವ ಕೈ ದೇವರ ಪ್ರತಿನಿಧಿ; ಮಾನವೀಯತೆಯ ಕುರುಹು  
ದಾನ ನೀಡುವುದು ಸಂಸ್ಕೃತಿಯ ಲಕ್ಷಣ  
ಅದರಲ್ಲೂ  
ಅಂಧ ಮಕ್ಕಳ ಅಭಿವೃದ್ಧಿಗೆ ನೆರವಾಗುವುದು

ಹೃದಯವಂತಿಕೆಯ ಕನ್ನಗನ್ನಡಿ.





ಪ್ರಪಂಚದ ಸೌಜನ್ಯವನ್ನು ಕದಡುವಂತಾಗಿದೆ. ಇದರಿಂದ ಸಮಾಜ ಏರುಪೇರಾಗುತ್ತಿದೆ. ಆದ್ದರಿಂದ ಓದಿ ಕಲಿಯುವದಕ್ಕಿಂತ ಇಂದು ನೋಡಿ ಕಲಿಯುತ್ತಿರುವ ಸಮಾಜದ ಮುಂದೆ ಚಲನ ಚಿತ್ರಗಳು ಆದರ್ಶ ಭಕ್ತಿ ಭಾವಗಳ ಉತ್ತಮ ಕಥಾಸಾಹಿತ್ಯವನ್ನು ಪ್ರಧಾನ ಕಥಾವಸ್ತುವನ್ನಾಗಿ ಇಟ್ಟುಕೊಂಡು ನಿರ್ಮಾಣವಾಗುವುದಾದರೆ ಇದರಿಂದ ಸುಸಂಸ್ಕೃತವಾದ ಭವ್ಯಭಾರತಾಂಬೆಯ ಘನತೆಗೆ ಮತ್ತಷ್ಟು ಪುಷ್ಟಿ ನೀಡಿದಂತಾಗುತ್ತದೆ ಎಂಬುದರಲ್ಲಿ ಸಂಶಯವಿಲ್ಲ.

ಈ ಪರಿಸ್ಥಿತಿಯಲ್ಲಿ ಚಲನ ಚಿತ್ರಗಳು ರಾಷ್ಟ್ರದ ಮಾಧ್ಯಮವಾಗಿ ಸಮಾಜದ ದಾರಿದೀಪವಾಗಬೇಕು. ಮಾನವಧರ್ಮದ ಮೈಲುಗಲ್ಲುಗಳಾಗಬೇಕು. ನಮ್ಮ ಭವ್ಯ ಪರಂಪರೆಯ ಸೊಬಗನ್ನು ಸಮಾಜಕ್ಕೆ ಮೈಗೂಡಿಸುವಂತಿರಬೇಕು. ಶ್ರೇಷ್ಠ ಸಮಾಜವನ್ನು ಪ್ರತಿಬಿಂಬಿಸುವ ದರ್ಪಣವಾಗಬೇಕು. ಕೇವಲ ಹಣ ಸಂಪಾದನೆಗಾಗಿ ಪಾಮರರನ್ನು ರಸಿಕರನ್ನು ಮುಗ್ಧ ಜನರನ್ನೂ ಆಕರ್ಷಿಸುವ ನಗ್ನ ದೃಶ್ಯಗಳಿಗೆ ಆದ್ಯತೆ ಕೊಡದು. ಪಾಶ್ಚಾತ್ಯ ಚಿತ್ರ ಪ್ರಪಂಚದ ವಿವಿಧ ವಿನ್ಯಾಸಕ್ಕೆ ಮಾರು ಹೋಗಿ ಅದನ್ನು ಪರೋಕ್ಷವಾಗಿ ನಮ್ಮ ರಾಷ್ಟ್ರಕ್ಕೆ ಅಂಟಿಸುವದಾಗಬಾರದು; ಇದರಿಂದ ನಮ್ಮ ಜನಮನ ಬಹುಬೇಗ ಕದಡಿಹೋದೀತು.

> ಚಿತ್ರಜಾಲಂ ಮಹಾರಣ್ಯಂ ಚಿತ್ತಭ್ರಮಣಕಾರಣಂ ।  
> ಅತಃ ಪ್ರಯತ್ನಾಜ್ಞಾತವ್ಯಂ ತತ್ತ್ವಜ್ಞಾತತ್ತ್ವಮಾತ್ಮನಃ ॥

ಈ ಚಿತ್ರಜಾಲವೆಂಬುದು ದೊಡ್ಡ ಅರಣ್ಯ, ಬುದ್ಧಿಯು ದಾರಿತಪ್ಪಿ ಭ್ರಮಿಸುವದಕ್ಕೆ ಕಾರಣವಾಗುತ್ತದೆ. ಆದ್ದರಿಂದ ಪ್ರೇಕ್ಷಣೀಯ ಸಾಮಾಜಿಕರಿಗೆ ಹೆಚ್ಚು ಈ ಬಗ್ಗೆ ಜಾಗರೂಕತೆ ಅತ್ಯವಶ್ಯಕ. ಅದರಲ್ಲಿನ ತತ್ವವನ್ನು ಮಾತ್ರ ಅರಿತುಕೊಳ್ಳಬೇಕು. ಕಂಡದ್ದನ್ನೆಲ್ಲ ಕೇಳಿದ್ದನ್ನೆಲ್ಲಾ ಅನುಕರಣೆ ಮಾಡಿದರೆ, ಅನಾಹುತವಾದೀತು. ತೆರೆಯ ಮೇಲಿನ ಚಿತ್ರ ತಾತ್ಕಾಲಿಕ. ಅದರಲ್ಲಿ ಜೀವನಕ್ಕೆ ಆತ್ಮ ತತ್ವವಿದ್ದಲ್ಲಿ ಪ್ರಯತ್ನಪೂರ್ವಕವಾಗಿ ತಿಳಿದುಕೊಳ್ಳಬೇಕು.

ಈ ನಮ್ಮ ಜನತೆಗೆ ಚಲನಚಿತ್ರ ಮಾಧ್ಯಮವು ಅನಿವಾರ್ಯ. ಅಂದಾಗ ಅವು ಅನ್ಯಭಾಷಾ ಸಾಹಿತ್ಯಗಳಿಂದ ಭಾಷಾಂತರವಾಗಿ ಬರುವ ಅಥವಾ ಅನುಕರಣೆಯಾಗಿ ಬರುವ ಕಥಾಸಾಹಿತ್ಯದಲ್ಲಿನ ಸಾರ. ಸಮಾಜಕ್ಕೆ ಸಜ್ಜನಿಕೆಯ ಚಿಜ್ಯೋತಿಯಾಗುವುದಾದರೆ ಅದಕ್ಕೆ ತಗಲುವ ಖರ್ಚನ್ನು ಲೆಕ್ಕಿಸದೆ ಸಮಾಜದ ಮೇಲೆ ಉಂಟಾಗುವ ಉತ್ತಮ ಫಲ ಪ್ರಯೋಜನವನ್ನು ಲಕ್ಷ್ಯದಲ್ಲಿಟ್ಟುಕೊಂಡು ಪ್ರದರ್ಶನ ಮಾಡುವುದಾದರೆ ಸಮಾಜ ಎಂದೆಂದಿಗೂ ಚಿರಋಣಿಯಾಗಲೇಬೇಕು.

(ದಿನಾಂಕ 1?–9–83ರ ಬೆಂಗಳೂರು ಆಕಾಶವಾಣಿ ಕೃಪೆಯಿಂದ ಪ್ರಸಾರವಾದುದು.)

# ಸ್ತ್ರೀ-ಸ್ವಾತಂತ್ರ್ಯ-ಚಳುವಳಿ

— ಜೆ. ಶಾರದ ರಾಜಶೇಕರ್

ಸ್ತ್ರೀ ಹದಿನೆಂಟನೆಯ ಶತಮಾನದಲ್ಲಿ ತನ್ನ ನೆಲೆಯನ್ನು ಕಂಡುಕೊಳ್ಳಲಾರಂಭಿಸಿದಳು. ಹದಿನಾರನೆಯ ಶತಮಾನದ ರಿಫಾರ್ಮೇಷನ್ ಅನಂತರ ಯೂರೋಪು ಖಂಡದಲ್ಲಿ ವಿದ್ಯಾಪ್ರಸಾರ ಜ್ಞಾನ ಪ್ರಸಾರಗಳು ತೀವ್ರವಾಗಿ ಜರುಗಿ ಜನ ಸಾಮಾನ್ಯರಲ್ಲಿಯೂ ತಿಳುವಳಿಕೆ ಮೂಡಲಾರಂಭಿಸಿತು. 1776ರಲ್ಲಿ ಜಾನ್ ಆಡೆಮ್ಸನು ಸಂಯುಕ್ತ ಸಂಸ್ಥಾನದ ದ್ವಿತೀಯಾಧ್ಯಕ್ಷನಾಗಿದ್ದನು. ರಾಜ್ಯನಿಬಂಧನೆಯನ್ನು ರಚಿಸಲು ಏರ್ಪಡಿಸಿದ್ದ ಕಾಂಗ್ರೆಸ್ಸಿಗೆ ಜಾನ್ ಆಡೆಮ್ಸನು ಹೋಗಿದ್ದಾಗ ಆತನ ಪತ್ನಿ ಆತನಿಗೆ ಈ ರೀತಿ ಪತ್ರ ಬರೆದಳು.

"ಸ್ತ್ರೀಯರ ಸ್ಥಾನಮಾನಗಳ ಯುಕ್ತ ಕಾರ್ಯಕ್ರಮಗಳನ್ನು ತೆಗೆದುಕೊಳ್ಳದಿದ್ದ ಪಕ್ಷದಲ್ಲಿ, ಮಹಿಳೆಯರು ಚಳುವಳಿ ಹೂಡಬೇಕಾಗುತ್ತದೆ. ನಮ್ಮ ಮೊರೆಯನ್ನು ಗಣನೆಗೆ ತೆಗೆದುಕೊಳ್ಳದ, ನಮಗೆ ಪ್ರಾತಿನಿಧ್ಯವಿಲ್ಲದ ಕಾನೂನಿಗೆ ನಾವು ತಲೆಬಾಗಬೇಕಾಗಿಲ್ಲ."

ಸುಮಾರು ಇದೇ ಅವಧಿಯಲ್ಲಿ ಇಂಗ್ಲೇಂಡಿನ ಮೇರಿ ವೋಲ್ಸ್ಟೋನ್‌ಕ್ರಾಫ್ಟಳು ಸ್ತ್ರೀಯರ ಹಕ್ಕುಗಳ ವಿಷಯವಾಗಿ ಗ್ರಂಥವೊಂದನ್ನು ಬರೆದು ಪ್ರಕಟಿಸಿದಳು. ಆದರೆ ಈ ಪ್ರಯತ್ನಗಳಿಂದ ಪ್ರಯೋಜನವೇನೂ ಲಭಿಸಲಿಲ್ಲ. ಬಡವರ ಮತ್ತು ಮಹಿಳೆಯರ ಕಷ್ಟ ಕಾರ್ಪಣ್ಯಗಳು ಮತ್ತಷ್ಟು ಅಧಿಕಗೊಂಡವು.

ಆದರೆ ಅಮೆರಿಕ ಮತ್ತು ಫ್ರಾನ್ಸಿನ ಕ್ರಾಂತಿಗಳನಂತರ ಸಾಮಾಜಿಕ ಕ್ಷೇತ್ರದಲ್ಲಿ ರೂಢಮೂಲವಾಗಿ ನೆಲಸಿದ್ದ ಹೇಯವಾದ ಪಿಡುಗುಗಳು ತಲೆಮರೆಸಿ ಕೊಳ್ಳಲಾರಂಭಿಸಿದವು. ಯೂರೋಪು ಖಂಡದಲ್ಲಿ ಮೊಟ್ಟಮೊದಲು ಸ್ತ್ರೀ ಸ್ವಾತಂತ್ರ್ಯ ಧ್ವಜವನ್ನು ಎತ್ತಿ ಹಿಡಿದವರು ಮೂವರು ಮಹಿಳೆಯರು. ಫ್ರಾನ್ಸಿನ ಜಾರ್ಜ್‌ಸ್ಯಾಂಡ್, ಜರ್ಮನಿಯ ಕೌಂಟೆಸ್, ಈಡ ಹೆಚ್. ಹಾನ್-ಹಾನ್ ಮತ್ತು ರಷ್ಯಾದ ಹೆಲೆನ ಅಂಡ್ರಿವ್ನ ಹಾನ್.

ಸಂಯುಕ್ತ ಸಂಸ್ಥಾನಗಳು ಎಲಿಜಬತ್ ಬ್ಲಾಕ್‌ವೆಲ್ ಎಂಬುವಳು 1849ರಲ್ಲಿ ಮೊಟ್ಟಮೊದಲು ವೈದ್ಯೆಯಾದಳು. ಬಹು ಕಾಲದ ಹೆಣಗಾಟದ ಫಲವಾಗಿ 1866ರಲ್ಲಿ ಅವಳು ಮಹಿಳೆಯರಿಗಾಗಿ ಮೆಡಿಕಲ್ ಕಾಲೇಜೊಂದನ್ನು ತೆರೆದಳು. ಅದೇ ಕಾಲದಲ್ಲಿ ಎಲಿಜಬತ್ ಫ್ರೈ ಎಂಬುವಳು ಇಂಗ್ಲೆಂಡಿನ ಜೈಲುಗಳ ಸುಧಾರಣೆಗಾಗಿ ತುಂಬಾ ಶ್ರಮಿಸಿದಳು.



ಗುಲಾಮ ಪದ್ಧತಿಯ ವಿರುದ್ಧ ಚಳುವಳಿಯಲ್ಲಿ ಅಮೆರಿಕದ ಮತ್ತು ಇಂಗ್ಲೆಂಡಿನ ಸ್ತ್ರೀಯರು ಪ್ರಧಾನ ಪಾತ್ರವಹಿಸಿದರು.

ಜಾನ್ ಸ್ಟುವರ್ಟ್ ಮಿಲ್ ಎಂಬ ಸುಪ್ರಸಿದ್ಧ ತತ್ವಜ್ಞಾನಿ 1365ರಲ್ಲಿ ಪಾರ್ಲಿಮೆಂಟಿಗೆ ಚುನಾಯಿತನಾದುದರಿಂದ ಸ್ತ್ರೀ ಸ್ವಾತಂತ್ರ್ಯ ಚಳುವಳಿಗೆ ಕಾವೇರಿತು. 1867ರಲ್ಲಿ ಸ್ತ್ರೀಯ ಮತದಾನಾಧಿಕಾರ ಸಂಪಾದನೆಗಾಗಿ ಸಂಸ್ಥೆಯೊಂದು ಲಂಡನ್ನಿನಲ್ಲಿ ಸ್ಥಾಪಿತವಾಯಿತು.

1869ರಲ್ಲಿ 'ಸ್ತ್ರೀಯರ ಬಂಧನ'ವೆಂಬ ಅತ್ಯಮೂಲ್ಯವಾದ ಪುಸ್ತಕವೊಂದನ್ನು ಮಿಲ್ ಪ್ರಕಟಿಸಿದರು. ಅಮೆರಿಕದ ವಿಲಿಯಮ್ ಲಾಯಿಡ್ ಗ್ಯಾರಿಸನ್ನರು ಸ್ಥಾಪಿಸಿದ ಗುಲಾಮ ಪದ್ಧತಿ ವಿರುದ್ಧ ಸಂಸ್ಥೆಯನ್ನು ಸೇರಲು ಸ್ತ್ರೀಯರಿಗೆ ಆಹ್ವಾನ ದೊರೆತುದಲ್ಲದೆ ಅಲ್ಲಿನ ಕಾರ್ಯಕಲಾಪಗಳಲ್ಲಿ ಭಾಗವಹಿಸುವ ಅಧಿಕಾರವೂ ಲಭಿಸಿತು.

1840ರಲ್ಲಿ ಲಂಡನ್ನಿನಲ್ಲಿ ನಡೆದ ಅಂತರ ರಾಷ್ಟ್ರೀಯ ಸಮ್ಮೇಳನಕ್ಕೆ ಆ ಸಂಸ್ಥೆಯ ಪರವಾಗಿ ಸ್ತ್ರೀ ಪ್ರತಿನಿಧಿಗಳು ಚುನಾಯಿತರಾದರು. ಆದರೆ ಅಲ್ಲಿ ಅವರಿಗೆ ಪ್ರವೇಶದೊರೆಯಲಿಲ್ಲ. ಆಗ ಜಾರ್ಜ್ ಬ್ರಾಡ್‌ಬರ್ನ್ ಎಂಬ ಮಹಾಶಯನು "ಸ್ತ್ರೀಯರ ದಾಸ್ಯಕ್ಕೆ ಬೈಬಲ್ಲಿನ ಒಪ್ಪಿಗೆಯಿದೆಯೆಂಬುದನ್ನು ಯಾರಾದರೂ ನಿದರ್ಶನ ಪೂರ್ವಕವಾಗಿ ಸಮರ್ಥಿಸುವುದಾದರೆ ಪ್ರಪಂಚದ ಬೈಬಲ್ಲುಗಳನ್ನೆಲ್ಲ ಶೇಖರಿಸಿ ಉತ್ಸವ ಚಿತೆಯಲ್ಲಿ ಹಾಕಿ ಸುಟ್ಟು ಇಡೀ ಮಾನವ ಕೋಟಿಗೆ ಸೇವೆ ಸಲ್ಲಿಸಬೇಕೆಂದಿದ್ದೇನೆ" ಎಂದು ಘೋಷಿಸಿದನು.

1875ರಲ್ಲಿ ಹೆಲೆನ ಪೆಟ್ರೋವ್ನ ಬ್ಲಾವಟ್ಸ್ಕಿಯು ಥಿಯಾಸಫಿ ಸಂಸ್ಥೆಯನ್ನು ಸ್ಥಾಪಿಸಿ ಸ್ತ್ರೀ ಪುರುಷರಿಗೆ ಸಾಮರಸ್ಯವನ್ನೂ, ಪೌರ್ವಾತ್ಯ ಪಾಶ್ಚಾತ್ಯ ದೇಶಗಳಿಗೆ ಹೊಂದಿಕೆಯನ್ನು ಸಾಧಿಸಲು ಯತ್ನಿಸಿದಳು. ಸತ್ಯಕ್ಕಿಂತ ಹಿರಿಯಮತವಿಲ್ಲವೆಂಬುದೇ ಆ ಸಂಸ್ಥೆಯ ಆದರ್ಶ ಸೂತ್ರವಾಯಿತು.

ಅಂತರ ರಾಷ್ಟ್ರೀಯ ಸಮ್ಮೇಳನದಲ್ಲಾದ ಅವಮಾನದಿಂದ ಕುದಿಯುತ್ತಿದ್ದ ಎಲಿಜಬೆತ್ ಕಾಡಿ ಸ್ಟಾಂಟನ್ ಮೊದಲಾದವರು 1848ರಲ್ಲಿ ಮೊಟ್ಟಮೊದಲು ಸ್ತ್ರೀ ಸಮ್ಮೇಳನವೊಂದನ್ನು ಏರ್ಪಡಿಸಿ ತಮ್ಮ ಹಕ್ಕುಗಳನ್ನು ಸ್ಪಷ್ಟಪಡಿಸಿದರು.

1903ರಲ್ಲಿ ಕ್ರಿಸ್ಟಬೆಲ್ ಪ್ಯಾಂಕ್‌ಹರ್ಸ್ಟ್ ಮೊದಲಾದವರು ಹೂಡಿದ ಚಳುವಳಿಯ ಪರಿಣಾಮವಾಗಿ ಅನೇಕ ದುರಂತ ಪ್ರಕರಣಗಳ ನಡೆದು ಲೋಕದ ಕಣ್ಣು ತೆರೆಯಿತು.

1914ರ ಮಹಾಯುದ್ಧ ಸ್ತ್ರೀಯರ ಶಕ್ತಿ, ಸಾಮರ್ಥ್ಯಗಳನ್ನು ಬೆಳಕಿಗೆ ತಂದಿತು. ಪುರುಷರ ಕಾರ್ಯಕಲಾಪಗಳಲ್ಲೆಲ್ಲ ಅವರು ಭಾಗವಹಿಸಿ ದಕ್ಷರೆಂದು ಹೆಸರು ಪಡೆದರು.

1918ರಲ್ಲಿ ಇಂಗ್ಲೆಂಡಿನ ಮಹಿಳೆಯರು ಪೌರರೆಂದು ಪರಿಗಣಿತರಾದರು. ಮುಂದಿನ ಎರಡು ವರ್ಷಗಳಲ್ಲಿಯೇ ಸ್ತ್ರೀಯರಿಗೆ ಮತದಾನಾಧಿಕಾರ ಲಭಿಸಿತು. ಆದರೂ ಪಕ್ಷಪಾತದಿಂದ ಕೂಡಿದ ಕೆಲವು ಕಾಯಿದೆಗಳು ಹಾಗೆಯೇ ಉಳಿದವು. ಆದರೆ ಹೆಣ್ಣಿಗೆ ಸ್ವಾತಂತ್ರ್ಯ ಹೆಚ್ಚಿದಂತೆಲ್ಲಾ ಎಲ್ಲೆಲ್ಲೂ ಕಳವಳ, ಅನಿಶ್ಚಯತೆ, ಅತೃಪ್ತಿಗಳೇ ತಾಂಡವವಾಡುತ್ತಿವೆ.

ಈ ದುಃಸ್ಥಿತಿಗೆ ಕಾರಣಗಳೇನೆಂದು ಸರ್ವರೂ ಹುಡುಕುವಂತಾಗಿದೆ.

ಮಾರ್ಗರೆಟ್ ಪೆರಿಬರ್ಟ್ಸನ್ ಹೇಳುವ ಕಾರಣಗಳಿವು.

(1) ಹೆಂಗಸು ಸ್ವತಂತ್ರಳಾದಂತೆಲ್ಲಾ ಅತೃಪ್ತಿ ಹೆಚ್ಚುತ್ತಿರುವುದು.

(2) ವಾಸ್ತವಿಕ ಜೀವನ ಪರಿಸ್ಥಿತಿಗೆ ಹೊಂದಿಕೊಳ್ಳುವಂತಹ ಶಿಕ್ಷಣವನ್ನು ತರುಣಿಯರಿಗೆ ಕೊಡದಿರುವುದು.

(3) ಸಾಮಾಜಿಕ ಕ್ರಾಂತಿಪ್ರವಾಹದಲ್ಲಿ ಸಿಕ್ಕಿದ ಹೆಣ್ಣು ತನ್ನ ನೆಲೆಯನ್ನು ಕಾಣದಿರುವುದು.

ಪ್ರಪಂಚ ಸಂಸ್ಥೆ ಸ್ತ್ರೀಯರ ಸ್ಥಾನಮಾನಗಳಿಗೆ ವಿಶೇಷವಾದ ಗೌರವವನ್ನು ಕೊಟ್ಟಿದೆ. 'ವೋಟಿನ ಸ್ವಾತಂತ್ರ್ಯ,' 'ವಿವಾಹವಿಚ್ಛೇದನದ ಸ್ವಾತಂತ್ರ್ಯ,' 'ಸಾರ್ವಜನಿಕ ಕಾರ್ಯಕ್ಷೇತ್ರಗಳಲ್ಲಿ ಸಮಭಾಗ' ಇವೆಲ್ಲದೊರೆತಿವೆ. ಆದರೆ ಅವಳ ಸುಖಹೆಚ್ಚಿದೆಯೆ? ಎಂಬ ಪ್ರಶ್ನೆಮಾತ್ರ ಹಾಗೆ ಉಳಿದಿದೆ.

ಪ್ರತಿಯೊಂದು ನೀಚಕಾರ್ಯದಲ್ಲೂ ಹೆಣ್ಣು ಗಂಡಸನ್ನು ಅನುಕರಿಸುತ್ತಿದ್ದಾಳೆಯೇ ಹೊರತು, "ನೈತಿಕ ಜೀವನದ ಕಡೆಗೆ ಅವಳ ಗಮನ ಹೋಗಿಲ್ಲ"

ತಾನು ಗಂಡಸಿಗಿಂತ ಕೀಳಲ್ಲವೆಂಬ ಅಂಶವನ್ನು ದೃಷ್ಟಿಯಲ್ಲಿಟ್ಟುಕೊಂಡು, ಕುಟುಂಬದ ಹಿತ, ದೇಶದ ಹಿತ ಎರಡನ್ನು ಮರೆಯದೆ, ಹಿಂಸೆಗೆ ಬದಲಾಗಿ ಅಹಿಂಸೆಯನ್ನು ಸ್ಥಾಪಿಸಿ ಸಮಾಜದ ಅಡಿಗಲ್ಲಾದ ಸಂಸಾರವನ್ನು ಸುಖಮಯವಾಗಿಸಿ, ಮಕ್ಕಳನ್ನು ಉತ್ತಮ ಪೌರರಾಗುವಂತೆ ಬೆಳಸಿದರೆ, ಬಾಳು ಲೇಸಾಗುವುದು. ನಾಡು ವೃದ್ಧಿಯಾಗುವುದು.

ಬಾಳು ಕೊಡುವ, ಬಾಳನ್ನು ರಕ್ಷಿಸುವ ಹೆಣ್ಣು
ಗಂಡಸಿನ ಕೈ ಹಿಡಿದು, ಅವನ ನಂಬಿಕೆಗೆ ಪಾತ್ರಳಾಗಿ
ಅವನ ಹೆಗಲಿಗೆ ಹೆಗಲು ಕೊಟ್ಟು ನಡೆದರೆ ಭೂಮಿಯಲ್ಲಿ
ಶಾಂತಿ ನೆಲಸಲನುಕೂಲವಾಗುವುದು.



# ಕ್ಷೇತ್ರ ವಾರ್ತೆ

## ದಾನಿಗಳ ದಾಸೋಹ

—ಸಂಪಾದಕ

ಶ್ರೀ ಸಿದ್ಧಗಂಗಾ ಕ್ಷೇತ್ರ ದಾಸೋಹ ಕೇಂದ್ರ, ದಾಸೋಹ ಕ್ಷೇತ್ರದ ಹಿರಿಮೆಯ ಮತ್ತೊಂದು ಮುಖ. ದಾಸೋಹಕ್ಕೆಂದು ಒಮ್ಮೆ ಹತ್ತಿಸಿದಬೆಂಕಿ ಇನ್ನೂ ಆರಿಲ್ಲ. ತಪಸ್ವಿಗಳ ತಪೋಜ್ವಾಲೆಯ ಜೊತೆ ಉರಿಯುತ್ತಿರುವ ಈ ದಾಸೋಹ ಜ್ಯೋತಿಗೆ ದಿನವಿಡೀ ವಿರಾಮವಿಲ್ಲ. ನಾಲ್ಕು ಸಾವಿರ ವಿದ್ಯಾರ್ಥಿಗಳ ಜೊತೆಗೆ ದರ್ಶನಕ್ಕೆ ಬರುವ ಭಕ್ತರೆಲ್ಲರಿಗೂ ಪ್ರಸಾದ ನೀಡುವ ಜಂಗಮ ಜೋಳಿಗೆ ವ್ಯಾಪ್ತಿ ವಿಶಾಲವಾದದ್ದು. ಈ ದಾಸೋಹ ಕೈಂಕರ್ಯ ನಾಡಿನ ಮನೆಮಾತು. ಕೇಳುವವರಿಗೊಂದು ಅಚ್ಚರಿ. ನೋಡಿದವರಿಗೊಂದು "ನಭೂತೋ ನ ಭವಿಷ್ಯತಿ" ಶ್ರೀ ಶ್ರೀ ಗಳವರಿಗದು ದೈನಂದಿನ ಕೃಷಿ. ಹೀಗೇ ಸಾಗಿದೆ ಇಲ್ಲಿನ ದಾಸೋಹ.

ಈ ದಾಸೋಹ ವ್ಯವಸ್ಥೆಯಲ್ಲಿ ಒಂದು ತ್ಯಾಗ, ಮತ್ತೊಂದದು ಪರಿತ್ಯಾಗ. ಪರಿತ್ಯಾಗ ಸಂಸಾರಿಧರ್ಮ, ಸಂಯಕ್ ತ್ಯಾಗ ಸನ್ಯಾಸಿ ಧರ್ಮ. ಸಂಪಾದನೆಯಲ್ಲಿ ಸ್ವಲ್ಪಾಂಶವನ್ನು ಸತ್ಕಾರ್ಯಕ್ಕಾಗಿ ತ್ಯಾಗ ಮಾಡುವುದು ಭಾರತೀಯ ಸದ್ಗೃಹಸ್ಥ ಧರ್ಮ. ದೊರೆತ ಸರ್ವಸ್ವವನ್ನೂ ಸಂಪೂರ್ಣ ದಾಸೋಹಂ ಭಾವದಿಂದ ಭಗವದರ್ಪಿತ ಮಾಡುವುದು ಸಂನ್ಯಾಸ ಧರ್ಮ. ಈ ಎರಡರ ಸಮ್ಮಿಳಿತ ಶ್ರೀ ಕ್ಷೇತ್ರದ ದಾಸೋಹ.

"ತನ್ನ ಭಕ್ತರಿಂದ ಬಂದ ಕಾಣಿಕೆಯನ್ನು ಭಕ್ತರ ಉದ್ಧಾರಕ್ಕೆಂದೇ ಮೀಸಲಿಟ್ಟ ಸನ್ಯಾಸಿಗಳು ಶ್ರೀ ಸಿದ್ಧಗಂಗಾ ಸ್ವಾಮಿಗಳು. ನಿಜವಾದ ಸನ್ಯಾಸ ಧರ್ಮ ಪಾಲನೆ ಮಾಡುವವರು. "ಈಗಿನ ಸಮಯದಲ್ಲೂ ಸಂನ್ಯಾಸಧರ್ಮ ಪಾಲನೆ ಒಂದು ಸಾಹಸ ಕಾರ್ಯವೇ"– ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಹಿರಿಯಕವಿ ಮಾಸ್ತಿ ವೆಂಕಟೇಶ ಅಯ್ಯಂಗಾರರ ಮುಕ್ತ ಪ್ರಶಂಸೆ.

ಶ್ರೀ ಕ್ಷೇತ್ರದ ದಾಸೋಹಕ್ಕೆಂದು ಧನ, ಧಾನ್ಯ, ಭೂಮಿ, ಮುಂತಾಗಿ ಅರ್ಪಿಸಿದವರು ಹಲವಾರು ಮಂದಿ. ಅನೇಕರು ಕೀರ್ತಿಶೇಷರಾಗಿ ನಮ್ಮ ಮುಂದೆ ಉಳಿದಿದ್ದಾರೆ. ಅವರ ಸಂಸ್ಮರಣೆ ಪ್ರಕೃತಕ್ಕೊಂದು ಸಂದರ್ಭ. ಅಂತೆಯೇ ಮೊನ್ನೆತಾನೆ ಶ್ರೀ ಕ್ಷೇತ್ರದ ಒಂದೊಂದು ದಿನದ ದಾಸೋಹವನ್ನು ಸಿಹಿ ಊಟದೊಡನೆ ನೆರವೇರಿಸಿದ ಮೂರು ಮಂದಿ ಪುಣ್ಯಾತ್ಮರ ಸೇವಾ ಪರಿಚಯ.

ತಾ|| 25-6-84 ರಂದು ಕೆನಡಾದಲ್ಲಿರುವ ಶ್ರೀಮತಿ ಚಂದ್ರಮ್ಮನವರ ಮಗ ಸುಬ್ಬಣ್ಣನಿಗೆ ಲಿಂಗಧಾರಣಾ ದೀಕ್ಷಾ ಸಂಸ್ಕಾರವನ್ನು ಶ್ರೀ ಕ್ಷೇತ್ರದಲ್ಲಿ ಶ್ರೀ ಸಿದ್ಧ-

ಲಿಂಗೇಶ್ವರ ಸ್ವಾಮಿಯ ಸನ್ನಿಧಿಯಲ್ಲಿ ಕೊಡಿಸಲಾಯಿತು. ಈ ಶುಭ ಸಂದರ್ಭವನ್ನು ಉಪಯೋಗಿಸಿಕೊಂಡು ಶ್ರೀಮತಿ ಚಂದ್ರಮ್ಮನವರು ಶ್ರೀ ಮಠದ ವಿದ್ಯಾರ್ಥಿಗಳಿಗೆ ಮತ್ತು ಬಂದ ಭಕ್ತಾದಿಗಳಿಗೆ ಆ ದಿವಸ ಸಿಹಿ ಊಟದ ವ್ಯವಸ್ಥೆಯನ್ನು ಮಾಡಿಸಿದರು.

ತಾ 1-7-84 ರಂದು ಬೆಂಗಳೂರಿನ ಶ್ರಿ ಜಿ.ಟಿ. ಶರ್ಮ 21/2 ಸ್ಪೆನ್ಸರ್ ರೋಡ್ ಪ್ರೆಜರ್ ಟೌ 2ನೇ ಅಡ್ಡ ರಸ್ತೆ ಬೆಂಗಳೂರು 5-ಇವರು ಅಂದು ವಿಶೇಷವಾದ ಸಿಹಿ ಊಟದ ವ್ಯವಸ್ಥೆಯನ್ನು ಶ್ರೀ ಮಠದ ಮಕ್ಕಳಿಗೆ ಮಾಡಿಸಲು ಹದಿನೈದು ಸಹಸ್ರ ರೂಪಾಯಿಗಳ ಕಾಣಿಕೆಯನ್ನು ಸಲ್ಲಿಸಿದ್ದರು. ಶ್ರೀ ಸ್ವಾಮೀಜಿಯವರ ಲೋಕ ಕಲ್ಯಾಣ ಕಾರ್ಯವನ್ನು ಕಣ್ತುಂಬ ಕಂಡು ಆನಂದಿಸಿ ನನ್ನ ಈ ಕಿರು ಕಾಣಿಕೆ ಎಂದು ತುಂಬು ಹೃದಯ ದಿಂದ ಅರ್ಪಿಸಿದರು. ಅವರಿಗೆ ಸತ್ಕಾರ್ಯಕ್ಕಾಗಿ ಸಮರ್ಪಿಸಿದ ಆತ್ಮ ತೃಪ್ತಿ.

ತಾ 6-7-84 ರಂದು ಬಿಜಾಪುರ ಜಿಲ್ಲೆಯ ಗುಳೇ ಗುಡ್ಡದ ಸದ್ಯದಲ್ಲಿ ತಿರುಚಿಯಲ್ಲಿರುವ ಶ್ರೀಯುತರಾದ ವಸ್ತ್ರದ್ ರವರು ಸುಮಾರು ನಾಲ್ಕೈದು ವರ್ಷಗಳಿಂದಲೂ ವರ್ಷಂಪ್ರತಿ ಸಿಹಿ ಊಟದ ವ್ಯವಸ್ಥೆಯನ್ನು ನಡೆಸುತ್ತಾ ಬಂದಿದ್ದಾರೆ. ಶ್ರೀಯುತರು ಕೆಲವು ವರ್ಷಗಳಲ್ಲಿ ಎರಡು,ಮೂರು ದಿವಸಗಳೂ ನೆಡೆಸಿರುವುದುಂಟು. ಈ ಪುಣ್ಯಾತ್ಮರ ಮನೋ ವೈಶಾಲ್ಯ ಅತ್ಯಂತ ಶ್ರೀಮಂತವಾದದ್ದು. ಅಂದು ಕುಟುಂಬದವರೊಡನೆ ಶ್ರೀ ಮಠಕ್ಕೆ ಬಂದು ಶ್ರೀ ಸ್ವಾಮಿಯ ಮತ್ತು ಶ್ರೀ ಶ್ರೀ ಗಳವರ ದರ್ಶನಾಶಿರ್ವಾದ ವನ್ನು ಪಡೆದು ತೃಪ್ತರಾಗಿ ತೆರಳುತ್ತಾರೆ.

ಹೀಗೆ ತಮ್ಮ ಸಂಪಾದನೆಯಲ್ಲಿ ಸಲ್ಪ ಭಾಗವನ್ನು ದಾಸೋಹ ಮಹತ್ಕಾರ್ಯದಲ್ಲಿ ಅರ್ಪಿಸಿದ್ದಾರೆ. ಶ್ರೀ ಮಠದ ದಿನದ ಒಂದು ಹೊತ್ತಿನ ಸಿಹಿ ಊಟವನ್ನು ನಾಲ್ಕು ಸಾವಿರ ಮಕ್ಕಳಿಗೆ ಉಣ ಬಡಿಸಿದ್ದಾರೆ. ಈ ಮೂರು ಮಂದಿ ಪುಣ್ಯಾತ್ಮರಿಗೆ ಕುಟುಂಬ ವರ್ಗಕ್ಕೆ ದಯಾಮಯನಾದ ಶ್ರೀ ಸಿದ್ಧಲಿಂಗೇಶ್ವರನೂ ಪೂಜ್ಯ ಶ್ರೀ ಶ್ರೀ ಗಳವರು ಮಂಗಳಾಶೀರ್ವಾದವನ್ನು ಅನುಗ್ರಹಿಸಲೆಂದು ಹಾರೈಸುತ್ತೇವೆ.

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

ಸುತ್ತ ಮುತ್ತ ಗುಡ್ಡ ಬೆಟ್ಟಗಳು. ಮಧ್ಯದಲ್ಲೊಂದು ಶರಣರು ಮೆಟ್ಟಿದ ಧರೆ, ಅವಿಮುಕ್ತ ಕ್ಷೇತ್ರ. ತಪೋನಿಧಿ ಕಲ್ಮರುಡೇಶ್ವರರು ನೆಲೆ ನಿಂತ ಪವಿತ್ರ ಕ್ಷೇತ್ರ. ಹೆಸರು ಕರಡಿ ಗವಿಮಠ, ಚಿಕ್ಕಮಗಳೂರು ಜಿಲ್ಲೆ ಸುತ್ತ ಹತ್ತು ಮೈಲಿಗಳ ದೂರದಲ್ಲಿ ಭಕ್ತರ ಪುಣ್ಯಾಶ್ರಮಗಳು. ಮಠವೊಂದೇ ಪ್ರಕೃತಿಯ ಪ್ರಶಾಂತ ಮಡಿಲಲ್ಲಿ. ಅಲ್ಲಿ ಬಸವ ಜಯಂತಿ ಮಠದ ಶ್ರೀ ಶ್ರೀಗಳು ಪೂಜ್ಯ ಶ್ರೀ ಶ್ರೀ ಶಂಕರಾನಂದ ಸ್ವಾಮಿಗಳು ಸಿದ್ಧಗಂಗಾ ಶ್ರೀ ಶ್ರೀ ಗಳವರ ಅನುಗ್ರಹ, ಹಾರೈಕೆ, ಅರಿವಿನ ಬೆಳಗಿನಲ್ಲಿ ಅರಳಿದ ಪುಣ್ಯ ಪುಷ್ಪ. ತಾ|| 15-4-84 ರಂದು ಕಾರ್ಯಕ್ರಮ ನಡೆದು ಸುತ್ತ ಮುತ್ತಲ ಗುಡ್ಡ ಬೆಟ್ಟಗಳೂ ಕಿವಿಗೊಟ್ಟವು; ಪ್ರತಿಧ್ವನಿಸಿದವು.

ಬೀರೂರು ಕ್ಷೇತ್ರದ ಶಾಸಕರಾದ ಶ್ರೀ ಲಕ್ಷ್ಮಯ್ಯನವರೆಂದರು- ರಾಜಕಾರಣಿಗಳಿಂದು ಬಸವ ತತ್ವಗಳನ್ನು ಅಧ್ಯಯನ ಮಾಡಬೇಕಾದ ಅಗತ್ಯ ಎಂದಿಗಿಂತ ಹೆಚ್ಚು ಎಂಬುದಾಗಿ.

ರಾಣಿ ಬೆನ್ನೂರಿನಿಂದ ಆಗಮಿಸಿದ್ದ ಶರಣ ವಿ. ವಿ. ಸಂಗಮದ ಮಾತನಾಡುತ್ತ ವೀರಶೈವರಲ್ಲಿ ಬಸವಣ್ಣನನ್ನು ಅರ್ಥ ಮಾಡಿಕೊಳ್ಳುವ ವ್ಯಕ್ತಿ ಇಲ್ಲ ಎಂಬ ಉತ್ತಂಗಿ ಚೆನ್ನಪ್ಪನವರ ಹೇಳಿಕೆಯನ್ನು ಉಲ್ಲೇಖಿಸಿದರು. ಜೀವನದ ಎಲ್ಲ ನಂಜಿಗೆ ಆತ್ಮ ಶಕ್ತಿಯನ್ನು ಬೆಳಸಿದ ಬಸವಣ್ಣ. ಆರ್ಥಿಕ ಬಡತನ, ಸಾಂಸ್ಕೃತಿಕ ಬಡತನ, ಧಾರ್ಮಿಕ ಬಡತನ, ಸಾತ್ವಿಕ ಬಡತನ ಇಂದು ಸಮಾಜಕ್ಕೆ ಬಂದು ಬಡಿದಿದೆ. ಅದರ ಪರಿಹಾರ ಬಸವಣ್ಣನವರ ಸಂದೇಶದಿಂದ ಸಾಧ್ಯ. ಆಸ್ತಿಕ ಭ್ರಷ್ಟರಾದರೂ ಚಿಂತೆಯಲ್ಲ ನಾಸ್ತಿಕರಾಗುವುದು ಬೇಡ ಎಂದರು. ಬಡತನದಲ್ಲಿ ಕಾಯಕವಿದೆ; ಆದರೆ ದಾರಿದ್ರ್ಯದಲ್ಲಿ ಆಲಸ್ಯವಿದೆ. ಕಾಯಕ ಶ್ರೀಮಂತಿಕೆಗೆ ಬಡತನ ಭಾಗ್ಯದ ಬಾಗಿಲು ಎಂದು ನುಡಿದರು.

ಅಭಿಮಾನವನ್ನು ಕಾಪಾಡಿ ಕೊಂಡು ಬಂದಾತ ಬಸವಣ್ಣ. ಗೊನೆ ಬಾಳೆಯಂತೆ ಬಾಗಿ ಬದುಕಿದಾತ ಮುಗ್ಧ ಹೃದಯಗಳನ್ನು ಬಾಚಿ ತಬ್ಬಿಕೊಂಡ ಮಾತೃ ಹೃದಯಿ, ಅಂಥ ಶುದ್ಧ ಸ್ಫಟಿಕ ವ್ಯಕ್ತಿತ್ವದ ನಿರ್ಮಲ ಮೂರ್ತಿ ಚಿತ್ರ ಜನಪದದ ಹಾಡುಗಳಲ್ಲಿ ಕಾಣಬರುತ್ತದೆ ಎಂದರು ಶ್ರೀ ಹೆಚ್. ವಿ. ವೀರಭದ್ರಯ್ಯ.



ಭರತ ಖಂಡದ ಬ್ರಹ್ಮತೇಜಸ್ಸು ನಂದಿ ಹೋಗಿಲ್ಲ. ಬುದ್ಧ-ಬಸವ-ಗಾಂಧೀಜಿಯಂಥ ಮಹಾ ಪುರುಷರ ಜೀವನ ಚರಿತ್ರೆ ಅದನ್ನು ಸ್ಪಷ್ಟಪಡಿಸಿದೆ. ಗಾಂಧಿ ಅರೆ ಬೆತ್ತಲೆಯ ಫಕೀರರಾಗಿಯೇ ಭರತ ವರ್ಷದ ಬದುಕಿಗೆ ಒಂದು ಹೊಸ ತಿರುವು ಕೊಟ್ಟರು. ಆ ತಿರುವಿನ ತಿರುಳು ಬಸವಣ್ಣನಲ್ಲಿದೆ. ವಿಜ್ಞಾನ ಯುಗದಲ್ಲಿರುವ ನಾವಿಂದು ಮುಕ್ತ ಮನಸ್ಸಿನಿಂದ ಆಳವಾದ ಅಧ್ಯಯನದಿಂದ ಅದನ್ನು ಕಂಡುಕೊಳ್ಳಬೇಕಾಗಿದೆ. ಶರಣರು ತೋರಿಸಿರುವ ಆ ಹಾದಿ ಎಲ್ಲ ಕಾಲಕ್ಕೂ ಆದರ್ಶವಾಗಿರುವಂಥದು. ಇಂದು ಪವಾಡಗಳನ್ನು ನಡೆಸುವ ಸ್ವಾಮಿಗಳಿದ್ದಾರೆ, ಸಿದ್ಧರಿದ್ದಾರೆ. ಆದರೆ ಪವಾಡಗಳಿಂದ ಯಾರೂ ದೊಡ್ಡವರಾಗುವುದಿಲ್ಲ, ಬಡವರ, ದುಃಖಿಗಳ ಅಸಹಾಯಕರ, ದುರ್ಬಲರ, ಹಿಂದುಳಿದವರ ಬದುಕನ್ನು ಉತ್ತಮಗೊಳಿಸುವುದರಿಂದ ದೊಡ್ಡವರಾಗಬಹುದು. ಹಸಿದ ಹೊಟ್ಟೆಯ ವ್ಯಕ್ತಿಗೆ ಗಡಿಯಾರ ಕೊಟ್ಟರೆ ಹೊಟ್ಟೆ ತುಂಬುವುದಿಲ್ಲ. ಸರ್ಕಾರ ಕೋಟಿಗಟ್ಟಲೆ ಹಣ ನೀಡುತ್ತದೆ. ಹರಿಜನರ-ಗಿರಿಜನರ, ಹಿಂದುಳಿದವರ ಉದ್ಧಾರಕ್ಕೆಂದು. ಆದರೆ ನಿರೀಕ್ಷಿಸಿದ ಫಲ ಕಾಣುತ್ತಿಲ್ಲ. ಆದಕ್ಕೆ ಬದಲಾಗಿ ಆ ದುಃಖಿಗಳಿಗೆ, ದೀನರಿಗೆ, ದಲಿತರಿಗೆ ಕಾಯಕ ಕೊಡುವುದಾಗಬೇಕು, ವಿಚಾರವಂತರನ್ನಾಗಿಸಬೇಕು, ಶುದ್ಧ ಜೀವನದ ಮಂಗಳ ದೃಶ್ಯವನ್ನಾಗಿಸುವಂತಾಗಬೇಕು. ಆದಕ್ಕಾಗಿ ಬಸವ ತತ್ವಗಳ ಪ್ರಚಾರ ನಡೆಯಬೇಕು ವಿನಯವಾರಿಧಿ ಬಸವಣ್ಣ, ಧೈರ್ಯಮೇರು, ವಿಚಾರದ ಹಿಮಾಲಯ, ದಯೆಯ ಕರುಣಾಮೂರ್ತಿ ಎಂಬುದಾಗಿ ಆಶೀರ್ವದಿಸುತ್ತ ಪರಮ ಪೂಜ್ಯ ಶ್ರೀ ಶ್ರೀಗಳವರು, ಕಾರ್ಯಕ್ರಮದ ವ್ಯವಸ್ಥೆ ಮಾಡಿದ ಕರಡಿ ಗವಿ ಮಠದ ಶ್ರೀ ಶ್ರೀಗಳವರ ಶ್ರದ್ಧಾ ಭಕ್ತಿಯನ್ನು ಪ್ರಶಂಸಿದರು.

ಹಾಲು ಚೆಲ್ಲಿದ ಬೆಳುದಿಂಗಳು, ಸಹಸ್ರಾರು ಮಂದಿಯ ಉತ್ಸಾಹದ ತೊರೆ. ಹರಿಯಿತು ನಾಟಕದ ಬಯಲಿಗೆ, ಶ್ರೀ ಕ್ಷೇತ್ರದ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯವರಿಂದ ಜಗಜ್ಯೋತಿ ಬಸವೇಶ್ವರ ನಾಟಕದ ಪ್ರದರ್ಶನ. ಹತ್ತು ಸಾವಿರ ಪ್ರೇಕ್ಷಕರ ನೆರವಿ, ಹೆಪ್ಪುಗಟ್ಟಿಸುವಂಥ ಚಳಿ. ಬೆಳಗಾಗುವ ತನಕ ಯಾರು ಕದಲಲಿಲ್ಲ. ನಾಟಕ ಮುಗಿದಾಗ ಬೆಟ್ಟದ ಬದಿಯಿಂದ ಹರ ಕರುಣೋದಯವೋ ಎನ್ನುವ ಹಾಗೆ ಅರುಣೋದಯವಾಗುತ್ತಿತ್ತು.

ಪಕ್ಕದ ಹಳ್ಳಿಯ ಗೌಡರೊಬ್ಬರು ಕೇಳಿದರು "ಸ್ವಾಮಿ ಮತ್ತೆಲ್ಲಿ ಇಂಥ ಕಾರ್ಯಕ್ರಮ ನಡೆಯುತ್ತೆ" ಕಾರ್ಯಕರ್ತರು ಹೇಳುತ್ತಿದ್ದರು "ಆಹ್ವಾನ ಇತ್ತರೆ ನಿಮ್ಮೂರಲ್ಲೂ ನಡೆಯುತ್ತದೆ." "ಆ ಪುಣ್ಯ ನಮ್ಮದಾಗ ಬಹುದೇಸ್ವಾಮಿ" ಯಾಕಿಲ್ಲ? ಶ್ರೀ ಶ್ರೀಗಳವರು ಯಾರಿಗೂ ನಿರಾಶೆ ಮಾಡಿಲ್ಲ, ಬಸವ ಭಕ್ತಿಯ ಬೆಳಕಿನ ಕಾರಂಜಿಯವರು.

---

ಸ್ವಾತಂತ್ರ್ಯ ನನ್ನ ಆಜನ್ಮ ಸಿದ್ಧ ಹಕ್ಕು. —ತಿಲಕ್

# ವಿವಿಧ ಸಮಾರಂಭಗಳಲ್ಲಿ ಶ್ರೀ ಶ್ರೀಗಳು

—ಪಿ. ಎನ್. ಚಂದ್ರಶೇಖರಯ್ಯ

ಬೆಂಗಳೂರಿನಲ್ಲಿ ನಡೆದ ಅಖಿಲ ಕರ್ನಾಟಕ ಪ್ರಾಥಮಿಕ ಶಾಲಾ ಉಪಾಧ್ಯಾಯರ ಮೂರು ದಿನದ ಸಮಾರಂಭದಲ್ಲಿ ಕೊನೆಯ ದಿನವಾದ ತಾ|| 14-7-84 ರಂದು ಶ್ರೀ ಶ್ರೀಗಳವರು ಮಾಡಿದ ಆಶೀರ್ವಚನ– ಈ ಸಮ್ಮೇಳನದ ಉದ್ದಿಶ್ಯ ಎರಡು, "ಪ್ರಾಥಮಿಕ ಶಿಕ್ಷಣವನ್ನು ಉತ್ತಮಪಡಿಸುವ ಬಗ್ಗೆ ಮತ್ತು ಶಿಕ್ಷಕರ ಕಲ್ಯಾಣದ ಬಗ್ಗೆ ಚರ್ಚೆ" ಇಂದಿನ ಶೈಕ್ಷಣಿಕ ಯುಗದಲ್ಲಿ ಇವುಗಳ ಚರ್ಚೆ ಅತ್ಯಗತ್ಯ. ಈ ಸಭೆ ಬುದ್ಧಿ ಜೀವಿಗಳ ಸಭೆ, ಬುದ್ಧಿ ಜೀವಿಗಳೆಲ್ಲರು ಒಂದೆಡೆ ಕಲೆತಿದ್ದೀರಿ. ಇಂದು ನಮ್ಮ ರಾಷ್ಟ್ರದ ಮುಂದಿರುವ ಹಲವು ಸಮಸ್ಯೆಗಳು ಗಂಭೀರವಾಗಿವೆ. ಎಲ್ಲ ಸಮಸ್ಯೆಗಳ ಪರಿಹಾರವಾಗಬೇಕಾದರೆ ಬುದ್ಧಿವಂತ ಪ್ರಜೆಗಳ ಅಗತ್ಯವಿದೆ. ಸಮಸ್ಯೆಗಳ ಪರಿಹಾರ ಕಾರ್ಯ ಯೋಗ್ಯ ಶಿಕ್ಷಣದಿಂದ ಸಾಧ್ಯ. ದೇಶದ ಅಭಿವೃದ್ಧಿಗೆ ಶಿಕ್ಷಣ ಸಿದ್ಧೌಷಧ. ಈ ಅಂಶವು ಮನಗಾಣಬೇಕು. ನಮ್ಮ ಪೂರ್ವಿಕರು 'ಆಚಾರ್ಯದೇವೋಭವ' ಎಂದು ಕರೆದರು ಶಿಕ್ಷಕರನ್ನು. ಆಚಾರ್ಯನೆನ್ನುವ ಪದವ್ಯಾಪ್ತಿಯಲ್ಲಿ, ಆಚಾರ್ಯ ಅದ್ಭುತ ಪಾಂಡಿತ್ಯವುಳ್ಳವನು, ಸರಳ ಜೀವನದ ಪ್ರತೀಕ, ನ್ಯಾಯನೀತಿ ಜೀವನದ ಪ್ರತೀಕ, ತ್ಯಾಗ ಜೀವನದ ಪ್ರತೀಕ. ಈ ದಿಶೆಯಲ್ಲಿ ಶಿಕ್ಷಕನ ಪಾತ್ರ ನಿರ್ವಾಹವಾಗಬೇಕು, ಹಳ್ಳಿಗಳಲ್ಲಂತೂ ಶಿಕ್ಷಕರ ಪಾತ್ರ ಹಿರಿದು. ಹಳ್ಳಿಗಳಲ್ಲಿನ ನಾಗರೀಕರಿಗೆ ಯೋಗ್ಯ ಮಾರ್ಗದರ್ಶನದ ಅಗತ್ಯವಿದೆ. ಆದ್ದರಿಂದ ಶಿಕ್ಷಕರ ಹೊಣೆ ಗುರುತರವಾದುದು.

ಸರಕಾರವು ಶಿಕ್ಷಕರ ಕಲ್ಯಾಣಕರ ಕಾರ್ಯದಲ್ಲಿ ಸಹಕಾರಿಯಾಗಬೇಕು. ಉತ್ತಮ ಶಿಕ್ಷಕರಿಗೆ ಪ್ರೋತ್ಸಾಹಕರವಾದ ಸವಲತ್ತನ್ನು ಒದಗಿಸುವುದು ಸರಕಾರದ ಕರ್ತವ್ಯ ಈ ಬಗ್ಗೆ ಉದಾಸೀನ ಸಲ್ಲದು.

ಶಿಕ್ಷಕರು ಶೀಲಸಂಪನ್ನರಾಗಿ, ಕರ್ತವ್ಯ ಪಾಲಕರಾಗಿ, ಜೀವನದ ಮೌಲ್ಯಗಳನ್ನು ಅರಿತು ಪಾಂಡಿತ್ಯಪೂರ್ಣ ಶಿಕ್ಷಣವನ್ನು ಕೊಡಬೇಕು. ಆಗಲೇ ಸಮಾಜವಾಗಲೀ, ರಾಷ್ಟ್ರವಾಗಲೀ ಉದ್ಧಾರವಾಗುವುದು. ಈ ದಿಶೆಯಲ್ಲಿ ಪ್ರಾಮಾಣಿಕವಾಗಿ ಶಿಕ್ಷಣ ಕ್ಷೇತ್ರದಲ್ಲಿ ಎಲ್ಲ ಶಿಕ್ಷಕ ಬಾಂಧವರು ಸೇವೆಸಲ್ಲಿಸುವ ಸದ್ಬುದ್ಧಿಯನ್ನು ದಯಾಮಯನಾದ ಪರಶಿವನು ಅನುಗ್ರಹಿಸಲೆಂದು ಹಾರೈಸುತ್ತೇವೆ.

ದಿನಾಂಕ 15-7-84 ರಂದು ಚಿಕ್ಕಬಳ್ಳಾಪುರದಲ್ಲಿ ಗೀತಾ ಕಂಠಪಾಠ ಸ್ಪರ್ಧಾ ಬಹುಮಾನ ವಿತರಣಾ ಸಭೆಯ ಅಧ್ಯಕ್ಷತೆ ವಹಿಸಿ ಅಪ್ಪಣೆ ಕೊಡಿಸಿದ ಆಶೀರ್ವಚನಗಳು. ಗೀತಾ ಸತ್ಸಂಗ ಸಮಿತಿಯವರು ಕೈಗೊಂಡಿರುವ ಗೀತಾ ಯಜ್ಞದ ಕಾರ್ಯಕ್ರಮ ನಿಜಕ್ಕೂ ಔಚಿತ್ಯಪೂರ್ಣವಾದುದು. ಇಂದಿನ ವೈಜ್ಞಾನಿಕ ಯುಗದಲ್ಲಿ ಇದರ ಅಗತ್ಯವಿದೆಯೇ ಎಂದು ಕೇಳುವವರುಂಟು. ಎಂದಿಗಿಂತಲೂ ಇಂದು ಇದರ ಅಗತ್ಯವುಂಟು. ವಿಶ್ವವೇ ಇಂದು ಅಶಾಂತಿಯ ತೌರುಮನೆಯಾಗಿದೆ. ವಿಶ್ವದಲ್ಲಿ ಶಾಂತಿ ಸ್ಥಾಪನೆಯಾಗಬೇಕಾಗಿದೆ. ಶಾಂತಿ ಸಾಮ್ರಾಜ್ಯಕ್ಕೆ ನಮ್ಮ ಪುರಾತನರು ಕೊಟ್ಟಿರುವ ಆಧ್ಯಾತ್ಮಿಕ ಸಂಪತ್ತು ಅಮೂಲ್ಯವಾದುದು ಎಂಬುದನ್ನು ಇಂದು ತೋರಿಸಿಕೊಡಬೇಕಾಗಿದೆ. ಆ ಆಧ್ಯಾತ್ಮಿಕ ಜ್ಯೋತಿ ಪ್ರಜ್ವಲಿಸಬೇಕು; ಈ ದಿಸೆಯಲ್ಲಿ ಈ ಸತ್ಸಂಗ ಕಾರ್ಯ ಪ್ರವೃತ್ತವಾಗಿದೆ, ಇದು ಹರ್ಷಪ್ರದವಾದುದು.

ನಮ್ಮ ರಾಷ್ಟ್ರದ ಜೀವನಾಡಿ ಆಧ್ಯಾತ್ಮಿಕ ಸಂಪತ್ತು. 'ನಮ್ಮವರು ಆಧ್ಯಾತ್ಮಿಕ ಅರಿವಿನಿಂದ ತಮ್ಮನ್ನು ಉದ್ಧಾರ ಮಾಡಿಕೊಂಡರು, ಈ ಸಂಪತ್ತಿನ ನೆರವನ್ನು ಜಗತ್ತಿಗೆ ಕೊಟ್ಟು ತಮ್ಮ ವಿಶ್ವವಿಶಾಲ ಹೃದಯ ವೈಶಾಲ್ಯತೆಯನ್ನು ಜಗತ್ತಿಗೆ ತೋರಿಸಿಕೊಟ್ಟರು. ಆ ಕಾರ್ಯವನ್ನು ನಮ್ಮ ಪೂರ್ವಿಕರು ಮಾಡಿ ತೋರಿಸಿದರು. ಈಗ ನಾವದನ್ನು ಮರೆತುಕೊಂಡಿದ್ದೇವೆ; ಅದರ ಸಂಸ್ಮರಣ ಕಾರ್ಯ ಇಂದು ಆಗಬೇಕಾಗಿದೆ. ಇಂತಹ ಸತ್ಸಂಗಗಳು ಮಾರ್ಗದರ್ಶಕವಾಗಬೇಕಾಗಿದೆ.

ನಿಜಕ್ಕೂ ನಮ್ಮ ದೇಶ ಜಗತ್ತಿಗೆ ಕೊಟ್ಟಿರುವ ವೇದಾಂತ ಸಂದೇಶ ಗೊಡ್ಡು ಸಂದೇಶವಲ್ಲ. ಜೀವನವನ್ನು ತಿರಸ್ಕರಿಸಿದುದಲ್ಲ, ಜೀವನವನ್ನು ಬಿಟ್ಟಿಲ್ಲ. ನಮ್ಮ ಜೀವನದ ಉದ್ದಗಲಕ್ಕೂ ವ್ಯಾಪಿಸಿನಿಂತಿದೆ. ಜೀವನ ರಸವತ್ತಾಗಿರಬೇಕು, ತೇಜೋವಂತವಾಗಿರಬೇಕು ಮತ್ತು ಅಭ್ಯುದಯ, ನಿಶ್ರೇಯಸ್ಸೆರಡನ್ನು ಜೊತೆಜೊತೆಗೆ ನಿರ್ವಹಿಸಬೇಕೆಂದು ಕೊಟ್ಟಿರುವ ಸಂದೇಶ ನಮ್ಮದು. ಅದರ ಅರಿವಿಲ್ಲದೆ ನಮ್ಮ ಕಷ್ಟಕಾರ್ಪಣ್ಯಗಳು, ಬಡತನ, ದಾರಿದ್ರ್ಯಗಳು ನಮ್ಮನ್ನು ಕಿತ್ತು ತಿನ್ನುತ್ತಿವೆ. ಜೀವನ ಕಳಾಹೀನವಾಗಿದೆ, ಬದುಕು ಬೇಸತ್ತಿದೆ, ನಿರ್ವೀರ್ಯರಾಗಿ ಜೀವನ ಸಾಗಿಸುತ್ತಿದ್ದೇವೆ. ಹೇಗೊ ಜೀವನ ನಿರ್ವಹಣೆ ಸಾಗಬೇಕಾಗಿರುವುದರಿಂದ ಸುಳ್ಳು, ಕಳವು, ಕೊಲೆ, ಹಿಂಸೆ ಅಪ್ರಮಾಣಿಕತೆಗಳು ತಾಂಡವವಾಡುತ್ತಿವೆ. ಕಲಿತ ಹಾಗೂ ಶಿಕ್ಷಿತ ಸಮಾಜದಲ್ಲಿಯೂ ಈ ಪಿಡುಗು ಅಂಟುಜಾಡ್ಯವಾಗಿ ಪರಿಣಮಿಸಿದೆ. ವ್ಯಕ್ತಿ ಇಂದು ಈ ಮೂರರ ಗುಲಾಮನಾಗಿದ್ದಾನೆ. ಅಧಿಕಾರ ದಾಹ, ಭೋಗ ಜೀವನದ ದಾಹ, ಹಣದ ದಾಹಗಳಿಗೆ ವಶನಾಗಿ ತನ್ನ ವ್ಯಕ್ತಿತ್ವವನ್ನೇ ಹಾಳುಗೆಡವಿಕೊಳ್ಳುತ್ತಿದ್ದಾನೆ. ಇವರಿಗೆ ಜೀವನದ ಕಲೆ ತಿಳಿಯದು, ಈ ಜನತೆಯ ಜೀವನವನ್ನು ನೆನಸಿಕೊಂಡರೆ ಪ್ರಾಣಿ ಜೀವನದ ನೆನಪುಂಟಾಗುತ್ತದೆ. ಇದು ಮನುಷ್ಯತ್ವಕ್ಕೆ ಶೋಭಾಯಮಾನವಲ್ಲ. ಪರಂತು ಮಾನವ

ಕುಲಕ್ಕೇ ಕಳಂಕಪ್ರಾಯ. ಆದ್ದರಿಂದ ಎಲ್ಲ ಬುದ್ಧಿವಂತ ವಿಚಾರಶೀಲ ತಂದೆ-ತಾಯಿಗಳು ಈ ಬಗ್ಗೆ ದೀರ್ಘವಾಗಿ ಚಿಂತಿಸಬೇಕು. ನಮ್ಮ ಮಕ್ಕಳ ಮುಂದಿನ ಭವಿಷ್ಯದ ಬಗ್ಗೆ ಯೋಗ್ಯವಾದ ಯೋಚನೆ ಮಾಡಬೇಕು. ಮುಂದೆ ಮತ್ತೆ ಶಿಲಾಯುಗದ ಸಂಸ್ಕೃತಿಯು ನಮ್ಮ ಕಣ್ಣ ಮುಂದೆ ಕಾಣುವ ಪರಿಸ್ಥಿತಿ ಒದಗಬಾರದು. ನಮ್ಮ ಭಾರತದ ಉಜ್ವಲವಾದ ಭವಿಷ್ಯ ಹಡಗೆಡಬಾರದು. ಈ ಹಾನಿ ಕೇವಲ ಭಾರತಕ್ಕಲ್ಲ, ಇಡೀ ವಿಶ್ವಕ್ಕೆ ಎಂಬುದಂತೂ ಸತ್ಯ. ಇಲ್ಲಿ ಸೇರಿರುವ ಎಲ್ಲ ಮಕ್ಕಳಿಗೂ ಮತ್ತು ಅವರ ಹಿರಿಯರಿಗೂ ನಮ್ಮದೇ ಆದ ಆಧ್ಯಾತ್ಮಿಕ ಸಂಪತ್ತು ಅರಿತು ಆಚರಣೆಯಲ್ಲಿ ತರುವಂತಹ ಸದ್ಭಾವನೆಯನ್ನು ಗೀತಾಚಾರ್ಯ ಪರಮಾತ್ಮನು ಅನುಗ್ರಹಿಸಲೆಂದು ಹಾರೈಸಿ ವಿರಮಿಸುತ್ತೇವೆ.





## ಈ ಸಂಚಿಕೆಯ ಲೇಖಕರು

೧ ವಿದ್ವಾನ್ ಎಸ್. ಷಡಕ್ಷರಿ
ಅಧ್ಯಾಪಕರು
ವೇದ ಮತ್ತು ಸಂಸ್ಕೃತ
ಮಹಾ ಪಾಠಶಾಲಾ
ಶ್ರೀ ಸಿದ್ಧಗಂಗಾ ಮಠ.

೨ ಪಂಡಿತ ಚನ್ನಪ್ಪ ಎರೇಸೀಮೆ
ಪ್ರಧಾನ ಸಂಪಾದಕರು
"ಸಿದ್ಧಗಂಗಾ" ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ.

೩ ಪು|| ರಾಮಕೃಷ್ಣ ಶಾಸ್ತ್ರಿಗಳು
"ಶಿವಶಕ್ತಿ ನಿಲಯ"
ಮಚ್ಚಿನ ಮೊಗ್ರು ಮತ್ತು
ಅಂಚೆ 574295
ಮಡಂತ್ಯಾರ್ ಮಾರ್ಗ
ದಕ್ಷಿಣ ಕನ್ನಡ ಜಿಲ್ಲಾ.

೪ ಎನ್. ಎಸ್. ಗದಗಕರ
ಶುಕ್ರವಾರಪೇಟೆ
ಸವಿಲುಗುಂಡ ಅಗಸೆ
ಧಾರವಾಡ.

೫ ಆಸ್ಥಾನ ವಿದ್ವಾನ್
ಎಂ. ಜಿ. ನಂಜುಂಡಾರಾಧ್ಯ
ಚಾಮುಂಡೇಶ್ವರಿ ಬಡಾವಣೆ
ಮೈಸೂರು.

೬ ಜಿ. ಶಾರದಾ ರಾಜಶೇಖರ್
847, 4ನೇ ಮುಖ್ಯ ರಸ್ತೆ
ವಿಜಯನಗರ
ಬೆಂಗಳೂರು-560040.

೭ ವಿದ್ವಾನ್
ಪಿ. ಎನ್. ಚಂದ್ರಶೇಖರಯ್ಯ
ಉಪ ಪ್ರಾಧ್ಯಾಪಕರು
ವೇದ ಮತ್ತು ಸಂಸ್ಕೃತ
ಮಹಾ ಪಾಠಶಾಲಾ
ಶ್ರೀ ಸಿದ್ಧಗಂಗಾ ಮಠ.

೮ ಹೆಚ್. ವಿ. ವೀರಭದ್ರಯ್ಯ,
ಎಂ.ಎ.
ಉಪನ್ಯಾಸಕರು
ಶ್ರೀ ಸಿದ್ಧಗಂಗಾ ಕಲೆ,
ವಾಣಿಜ್ಯ ಮತ್ತು ವಿಜ್ಞಾನ
ಕಾಲೇಜು
ತುಮಕೂರು.

## ಒಂದು ವಿಶೇಷ ಪ್ರಕಟಣೆ

ಪರಮ ಪೂಜ್ಯ ಶ್ರೀ ಶ್ರೀಗಳವರ ದಿವ್ಯ ನೇತೃತ್ವದಲ್ಲಿ
ಗ್ರಾಮಾಂತರ ಬಸವ ಜಯಂತ್ಯುತ್ಸವ ವಿಶೇಷ ಕಾರ್ಯಕ್ರಮವಾಗಿ
ತಾ|| 2-9-84ರ ಭಾನುವಾರ ಬೆಂಗಳೂರು ನಗರದ
ಶ್ರೀ ಪುಟ್ಟಣ್ಣ ಚೆಟ್ಟಿ ನಗರಭವನದಲ್ಲಿ ನಡೆಯುವ ಏರ್ಪಾಡಾಗಿದೆ.

# ಹಲವು ಯೋಜನೆ–ಹಲವು ಸಾಧನೆ

ಕರ್ನಾಟಕದಲ್ಲಿ ಜನತಾ ಸರ್ಕಾರ ಅಧಿಕಾರ ವಹಿಸಿಕೊಂಡು ಒಂದೂವರೆ ವರ್ಷ ಕಳೆಯಿತು. ಈ ಅವಧಿಯಲ್ಲಿ ಸರ್ಕಾರವು ಹಲವಾಗು ಸಾಮಾಜಿಕ ಆರ್ಥಿಕ ಕಾರ್ಯಕ್ರಮಗಳು ಗ್ರಾಮೀಣ ಜನತೆಯ ಬಡತನವನ್ನು ನಿವಾರಿಸಿ, ಅವರ ಬಾಳನ್ನು ಹಸನುಗೊಳಿಸಲೆಂದೇ ರೂಪಿಸಿದೆ. ಆಡಳಿತ, ಗ್ರಾಮ ಸ್ವರಾಜ್ಯ ಮತ್ತು ಶಿಕ್ಷಣ ಕ್ಷೇತ್ರಗಳಲ್ಲಿ ಸುಧಾರಣೆಗಳನ್ನು ತರಲೆಂದೇ ಸರ್ಕಾರವು ಹಲವು ಕ್ರಮಗಳನ್ನು ಕೈಗೊಂಡಿದೆ.

**ಸಮಗ್ರ ಶಿಕ್ಷಣ ಮಸೂದೆ :**

ರಾಜ್ಯದಲ್ಲಿ ಪ್ರಥಮ ಬಾರಿಗೆ ಶಿಕ್ಷಣ ಕ್ಷೇತ್ರದ ಸುಧಾರಣೆಗಾಗಿ ಸಮಗ್ರ ಶಿಕ್ಷಣ ಮಸೂದೆಯ ರಚನೆ. ಅನಕ್ಷರತೆಯ ನಿರ್ಮೂಲನೆಗಾಗಿ ಅಕ್ಷರ ಸೇನೆ. ಪ್ರತಿವರ್ಷ ಎರಡು ಸಾವಿರ ಪ್ರಾಥಮಿಕ ಪೂರ್ವ ಶಾಲೆಗಳನ್ನು ಪ್ರಾರಂಭಿಸುವುದು ಇದರ ಗುರಿ. ಶಾಲೆ ಬಿಟ್ಟ ಮಕ್ಕಳಿಗಾಗಿ ಅನೌಪಚಾರಿಕ ಶಿಕ್ಷಣ ನೀಡುವ 3769 ಸಾಕ್ಷರತಾ ಕೇಂದ್ರಗಳನ್ನು ತೆರೆಯಲಾಗಿದೆ.

ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶಕ್ಕಾಗಿ ಕ್ಯಾಪಿಟೇಷನ್ ಶುಲ್ಕ ವಸೂಲಿ ರದ್ದತಿ. ಬೋಧನಾ ಶುಲ್ಕ, ತೇವಣಿ ಹಾಗೂ ಇತರ ಶುಲ್ಕಗಳು ವೃತ್ತಿ ಶಿಕ್ಷಣ ಸಂಸ್ಥೆಗಳಿಗೆ ಪ್ರವೇಶ ಪರೀಕ್ಷೆ ಇವು ಸಮಗ್ರ ಶಿಕ್ಷಣ ಮಸೂದೆಯ ಮುಖ್ಯಾಂಶಗಳು.

**ಕೃಷಿಕರಿಗೆ ಬೆಂಬಲ :**

ರೈತರ ಸ್ಥಿತಿಗತಿಗಳ ಸುಧಾರಣೆಗೆ ನಮ್ಮ ಸರ್ಕಾರದ ಆದ್ಯ ಗಮನ. ಈಗಾಗಲೇ ಸುಮಾರು 70 ಕೋಟಿ ರೂ.ಗಳ ಪರಿಹಾರವನ್ನು ನೀಡಲಾಗಿದೆ.

ದೀರ್ಘಕಾಲ ಬಾಕಿ ಉಳಿದಿದ್ದ ತಕಾವಿ, ನೆರೆ ಪರಿಹಾರಗಳ ಸಾಲ ಮನ್ನಾ ಆಹಾರ ಧಾನ್ಯಗಳಿಗೆ ಬೆಂಬಲ ಬೆಲೆ ನಿರ್ಧಾರ.

ಸಹಕಾರಿ ಮತ್ತು ಕೃಷಿ ಸಾಲಗಳ ಮೇಲಿನ ಬಡ್ಡಿ ಮತ್ತು ಸುಸ್ತಿ ಬಡ್ಡಿಗಳ ಮನ್ನಾ. ಇದರಿಂದ 7.62 ಲಕ್ಷ ರೈತರಿಗೆ ಪ್ರಯೋಜನ.

ಒಣ ಬೇಸಾಯ ಅಭಿವೃದ್ಧಿಗೆ ಉತ್ತೇಜನ. ಸಣ್ಣ ಮತ್ತು ಹಿಂದುಳಿದ ವರ್ಗದ ರೈತರಿಗೆ ಬೀಜ ಹಾಗೂ ಗೊಬ್ಬರಗಳ ಪೂರೈಕೆ.

**ಉದ್ಯಮಗಳಿಗೆ ಸದವಕಾಶಗಳು :**

ರಾಜ್ಯದ ಕೈಗಾರಿಕಾಭಿವೃದ್ಧಿಗೆ ಹೊಸ ಧೋರಣೆ. ಪ್ರತಿ ತಿಂಗಳು ಒಂದು ಸಾವಿರ ಕೈಗಾರಿಕೆಗಳ ಸ್ಥಾಪನೆಗೆ ಕ್ರಮ. ಇದುವರೆವಿಗೆ ಪ್ರತಿ ತಿಂಗಳು 630 ಹೊಸ ಘಟಕಗಳ ಸ್ಥಾಪನೆ.

ಹೊಸ ಕೈಗಾರಿಕೆಗಳ ಸ್ಥಾಪನೆಗೆ ಎಲ್ಲ ನೆರವನ್ನು ಒಂದೇ ಸ್ಥಳದಲ್ಲಿ ದೊರೆಯುವಂತೆ ಮಾಡುವ 'ಏಕ ಗವಾಕ್ಷ' ವ್ಯವಸ್ಥೆಯ ಸ್ಥಾಪನೆ.

**ಅಂತ್ಯೋದಯ :**

ಸಮಗ್ರ ಗ್ರಾಮೀಣ ಅಭಿವೃದ್ಧಿಯನ್ವಯ ಪ್ರತಿ ಗ್ರಾಮದ ಐದು ಕಡು ಬಡವರ ಕುಟುಂಬಗಳಿಗೆ ವಿವಿಧ ಉತ್ಪಾದನಾ ಕಾರ್ಯಗಳನ್ನು ಕೈಗೊಳ್ಳಲು ಸಾಲ ಮತ್ತು ಸಹಾಯಧನದ ನೆರವು. ಇದೀಗ ರಾಜ್ಯದ 19 ಜಿಲ್ಲೆಗಳ 46 ತಾಲ್ಲೂಕುಗಳಲ್ಲಿ ಜಾರಿಯಾಗಿದೆ.

**ಸ್ವಯಂ ಉದ್ಯೋಗಕ್ಕೆ ನೆರವು :**

ನಿರುದ್ಯೋಗ ಪದವೀಧರರು ಸ್ವಯಂ ಉದ್ಯೋಗಗಳನ್ನು ಕೈಗೊಳ್ಳಲು ಸಹಾಯ ಧನವೂ ಸೇರಿದಂತೆ ಎಲ್ಲ ರೀತಿಯ ನೆರವು. ತಾಂತ್ರಿಕ ಹಾಗೂ ವೃತ್ತಿ ಪರಿಣತರಿಗೆ ನೂರಕ್ಕೆ ನೂರು ಹಣಕಾಸು ನೆರವು ನೀಡುವ ಯೋಜನೆಯ ಮೊಬಲಗನ್ನು 5 ಲಕ್ಷ ರೂ.ಗಳಿಂದ 7.5 ಲಕ್ಷ ರೂಗಳಿಗೆ ಹೆಚ್ಚಿಸಲಾಗಿದೆ.

**ವಿಧವೆಯರಿಗೆ ಮಾಸಾಶನ :**

ಹದಿನೆಂಟು ವರ್ಷಕ್ಕೆ ಮೇಲ್ಪಟ್ಟ ಸಂಕಷ್ಟ ಸ್ಥಿತಿಯಲ್ಲಿರುವ ವಿಧವೆಯರಿಗೆ 50 ರೂ.ಗಳ ಮಾಸಿಕ ವೇತನ, ಕೃಷಿ ಕಾರ್ಮಿಕ ಮಹಿಳೆಯರಿಗೆ ಮೂರು ತಿಂಗಳ ಅವಧಿಯ ಮಾಸಿಕ ನೂರು ರೂಗಳ ಹೆರಿಗೆ ಭತ್ಯ.

**ನಿರಂತರ ಉದ್ಯೋಗ :**

ಗ್ರಾಮೀಣ ಪ್ರದೇಶದ 18ರಿಂದ 60 ವರ್ಷ ವಯಸ್ಸಿನ ಉದ್ಯೋಗಾಕಾಂಕ್ಷಿಗಳಿಗೆ ಉದ್ಯೋಗ ನೀಡಲು ನಿರಂತರ ಉದ್ಯೋಗ ಯೋಜನೆಯ ಪ್ರಾರಂಭ. ಇದನ್ನೀಗ ರಾಜ್ಯದ 45 ತಾಲ್ಲೂಕುಗಳಲ್ಲಿ ಕಾರ್ಯಗತಗೊಳಿಸಲಾಗಿದೆ.

**ಲೋಕಾಯುಕ್ತ :**

ಸಾರ್ವಜನಿಕ ರಂಗ ಭ್ರಷ್ಟಾಚಾರವನ್ನು ತೊಡೆದು ಹಾಕಲು ಲೋಕಾಯುಕ್ತದ ಸ್ಥಾಪನೆ. ಇದರ ವ್ಯಾಪ್ತಿಗೆ ಮುಖ್ಯಮಂತ್ರಿಯೂ ಸೇರಿದಂತೆ ಎಲ್ಲ ಮಂತ್ರಿಗಳು, ಶಾಸಕರು, ಸಹಕಾರಿ ಸಂಘಗಳು ಮತ್ತು ಕಾರ್ಪೋರೇಷನ್‌ಗಳ ಪದಾಧಿಕಾರಿಗಳೂ ಸರ್ಕಾರಿ ಅಧಿಕಾರಿಗಳೂ ಬರುತ್ತಾರೆ.

**ಕುಡಿಯುವ ನೀರು :**

ಹಳ್ಳಿ ಹಳ್ಳಿಗೂ ಕುಡಿಯುವ ನೀರಿನ ಪೂರೈಕೆ. ಈಗಾಗಲೇ ರಾಜ್ಯದ 16,000 ಹಳ್ಳಿಗಳಲ್ಲಿ 20 ಸಾವಿರ ಕೊಳವೆ ಬಾವಿಗಳು, ಸಾಧ್ಯವಾಗದ ಕಡೆ 560 ತೆರೆದ ಬಾವಿಗಳ ನಿರ್ಮಾಣ.

**ಜನಜೀವನ ಸುಧಾರಣೆಗೆ ಕೈಗೊಂಡಿರುವ ಇತರ ಕ್ರಮಗಳು.**

* ಆಡಳಿತ ವಿಕೇಂದ್ರೀಕರಣಕ್ಕಾಗಿ ಮಂಡಲ ಪಂಚಾಯಿತಿ ಮತ್ತು ಜಿಲ್ಲಾ ಪರಿಷತ್ತುಗಳ ಸ್ಥಾಪನೆ.
* ಗ್ರಾಮೀಣ ಪ್ರದೇಶಗಳ ಸಾರಿಗೆ ಸುಧಾರಣೆಗಾಗಿ ಸಮಗ್ರ ಸಾರಿಗೆ ಯೋಜನೆ.
* ಶಾಲಾ ಕಾಲೇಜು ವಿದ್ಯಾರ್ಥಿಗಳು, ಪತ್ರಕರ್ತರು ಮತ್ತು ವೃದ್ಧರಿಗೆ ರಿಯಾಯಿತಿಯ ಪ್ರಯಾಣ ಸೌಲಭ್ಯ.
* ಪ್ರತಿಭಾವಂತ ಹರಿಜನ ಗಿರಿಜನ ವಿದ್ಯಾರ್ಥಿಗಳಿಗೆ ನೇರವಾಗಿ ಅಧಿಕಾರಿ ಹುದ್ದೆ ನೀಡುವ ಯೋಜನೆ.
* ಅಲ್ಪ ಸಂಖ್ಯಾತರು ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ಆಯೋಗದ ನೇಮಕ.
* ಹದಿನಾಲ್ಕು ವರ್ಗಗಳ ಉದ್ಯೋಗಿಗಳಿಗೆ ಪುನರ್ವಿಮರ್ಶಿತ ಕನಿಷ್ಠ ವೇತನ ನಿಗದಿ.

"ಕರ್ನಾಟಕ ವಾರ್ತೆ"

LICENCED TO POST WITHOUT PRE PAYMENT LICENCE NO. 3
SIDDAGANGA Monthly Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.